ಒರಗಿರುತ್ತಲೊಂದು ಕನಸ ಕಂಡನೆಂತೆನೆ
ಪುರದ ರಾಜ ಸತ್ತನವಗೆ
ವರಕುಮಾರರಿಲ್ಲದಿರಲು
ಕರಿಯ ಕೈಗೆ ಕುಸುಮಮಾಲೆಯಿತ್ತು ಪುರದೊಳು 1

ನಡೆದು ಯಾರ ಕೊರಳಿನಲ್ಲಿ
ತೊಡರಿಸುವುದೊ ಅವರ ಪಟ್ಟ
ಕೊಡೆಯರನು ಮಾಳ್ವೆವೆಂದು ಬಿಟ್ಟರಲ್ಲಿಯೆ
ಒಡನೆ ತನ್ನ ಕೊರಳಿನಲ್ಲಿ
ತೊಡರಿಸಲ್ಕೆ ಕಂಡು ತಿರುಕ
ಪೊಡವಿಯಾಣ್ಮನಾದೆನೆಂದು ಹಿಗ್ಗುತಿರ್ದನು 2

ಪಟ್ಟವನ್ನು ಕಟ್ಟೆ ನೃಪರು
ಕೊಟ್ಟರವಗೆ ಕನ್ಯೆಯರನು
ನೆಟ್ಟನವನು ರಾಜ್ಯವಾಳ್ದ ಕನಸಿನಲ್ಲಿಯೇ
ಭಟ್ಟನಿಗಳ ಕೂಡೆ ನಲ್ಲ
ನಿಷ್ಟಸುಖದೊಳಿರಲವಂಗೆ
ಹುಟ್ಟಿ ಹೆಣ್ಣು ಗಂಡು ಮಕ್ಕಳಾದುವಾಗಲೇ 3

ಓಲಗದಲಿರುತ್ತ ತೊಡೆಯ
ಮೇಲೆ ಮಕ್ಕಳಾಡುತಿರಲು
ಲೀಲೆಯಿಂದ ಚಾತುರಂಗ ಬಲವ ನೋಡುತ
ಲೋಲನಾಗಿ ನುಡಿದನಿನಿತು
ಕೇಳು ಮಂತ್ರಿ ಸುತರುಗಳಿಗೆ
ಬಾಲೆಯರನು ನೋಡಿ ಮದುವೆ ಮಾಡಬೇಕೆಲೆ 4

ನೋಡಿ ಬನ್ನಿರೆನಲು ಜೀಯ
ನೋಡಿ ಬಂದೆವೆನಲು ಬೇಗ ಮಾಡು
ಮದುವೆ ಮಂಟಪದೊಳು ಸಕಲ ಕಾರ್ಯವ
ಗಾಢವಾಗೆ ಸಂಭ್ರಮಗಳು
ಮಾಡುತಿದ್ದ ಮದುವೆಗಳನು
ಕೂಡಿದಖಿಳ ರಾಯರೆಲ್ಲ ಮೆಚ್ಚುವಂದದಿ. 5

ಧನದ ಮದವು ರಾಜ್ಯ ಮದವು
ತನುಜಮದವು ಯುವತಿಮದವು
ಜನಿತಮಾಗಿ ಕನಸಿನಲ್ಲಿ ಹಿಗ್ಗುತಿರ್ದನು
ಅನಿತರೊಳಗೆ ನೃಪರ ದಂಡು

ಮನೆಯ ಮುತ್ತಿದಂತೆಯಾಗೆ
ಕನಸ ಕಾಣುತಿರ್ದು ಹೆದರಿ ಕಣ್ಣ ತೆರೆದನು. 6

## ಮರು ಓದು

1. ತಿರುಕನು ಒರ್ವನು ಊರ ಮುಂದೆ ಮುರುಕು ಧರ್ಮ ಶಾಲೆಯಲ್ಲಿ ಒರಗಿರುತ್ತಲು ಒಂದು ಕನಸನ್ನು ಕಂಡನು ಎಂತೆನೆ; ಎಂತುಎನೆ. ಪುರದ ರಾಜ ಸತ್ತನು ಅವಗೆ ವರಕುಮಾರರು ಇಲ್ಲದೆ ಇರಲು ಕರಿಯ ಕೈಗೆ ಕುಸುಮಮಾಲೆಯ ಇತ್ತು ಪುರದ ಒಳು.

2. ನಡೆದು ಯಾರ ಕೊರಳಿನಲ್ಲಿ ತೊಡರಿಸುವದೊ ಅವರ ಪಟ್ಟಕೆ ಒಡೆಯರನ್ನ ಮಾಳ್ಪೆವು ಎಂದು ಬಿಟ್ಟರು ಅಲ್ಲಿಯೆ. ಒಡನೆ ತನ್ನ ಕೊರಳಿನಲ್ಲಿ ತೊಡರಿಸಲ್ಕೆ ಕಂಡು ತಿರುಕ ಪೊಡವಿ, ಆಣ್ಮನು ಆದೆನು ಎಂದು ಹಿಗ್ಗುತ ಇರ್ದನು.

3. ಪಟ್ಟವನ್ನು ಕಟ್ಟಿ ನೃಪರು ಕೊಟ್ಟರು ಅವಗೆ ಕನ್ಯೆಯರನು ನೆಟನೆ ಅವನು ರಾಜ್ಯವ ಆಳ್ದ ಕನಸಿನಲ್ಲಿಯೇ. ಭಟ್ಟನಿಗಳ ಕೂಡಿ ನಲ್ಲನು ಇಷ್ಟ ಸುಖದೊಳು ಇರಲು ಅವಂಗೆ ಹುಟ್ಟಿ ಹೆಣ್ಣು ಗಂಡು ಮಕ್ಕಳು ಆದುವು ಆಗಲೇ.

4. ಓಲಗದಲಿ ಇರುತ್ತ ತೊಡೆಯ ಮೇಲೆ ಮಕ್ಕಳು ಆಡುತ ಇರಲು ಲೀಲೆಯಿಂದ ಚಾತುರಂಗ ಬಲವ ನೋಡುತ, ಲೋಲನಾಗಿ ನುಡಿದನು ಇನಿತು ಕೇಳು ಮಂತ್ರ, ಸುತರುಗಳಿಗೆ ಬಾಲೆಯರನು ನೋಡಿ ಮದುವೆ ಮಾಡಬೇಕಲೆ.

5. ನೋಡಿ ಬನ್ನಿರಿ ಎನಲು ಜೀಯ ನೋಡಿ ಬಂದೆವು ಎನಲು ಬೇಗ ಮಾಡು ಮದುವೆ ಮಂಟಪದ ಒಳು ಸಕಲ ಕಾರ್ಯವ. ಗಾಢವಾಗೆ ಸಂಭ್ರಮಗಳು ಮಾಡುತ ಇದ್ದ ಮದುವೆಗಳನು ಕೂಡಿದ ಅಖಿಳ ರಾಯರೆಲ್ಲ ಮೆಚ್ಚುವ ಅಂದದಿ.

6. ಧನದ ಮದವು, ರಾಜ್ಯ ಮದವು, ತನುಜ ಮದವು, ಯುವತಿ ಮದವು ಜನಿತಮಾಗಿ ಕನಸಿನಲ್ಲಿ ಹಿಗ್ಗುತ ಇರ್ದನು. ಅನಿತರ ಒಳಗೆ ನೃಪರ ದಂಡು ಮನೆಯ ಮುತ್ತಿದಂತೆ ಆಗಿ ಕನಸ ಕಾಣುತ ಇರ್ದು ಹೆದರಿ ಕಣ್ಣ ತೆರದನು.

**ಕ್ಷೇತ್ರ:** ಆಲಿಸುವುದು

**ಸಾಮರ್ಥ್ಯ:** ವಿಷಯವನ್ನು ಆಲಿಸಿದ ಬಳಿಕ ಏಕೆ? ಹೇಗೆ? ಎಂಬ ಪ್ರಶ್ನೆಗಳಿಗೆ ಕಾರಣ ಸಹಿತ ವಿಶ್ಲೇಷಿಸುವುದು.

## ಕೃತಿಕಾರರ ಪರಿಚಯ

ಮುಪ್ಪಿನ ಷಡಕ್ಷರಿ ಇವರು ಕ್ರಿಸ್ತ ಶಕ 1500 ರ ಸುಮಾರಿಗೆ ಜೀವಿಸಿದ್ದರು. ಕಾವೇರಿ ತೀರದ ಶಂಭುಲಿಂಗ ಬೆಟ್ಟದಲ್ಲಿ ಇವರು ತಪಸ್ಸು ಮಾಡಿದ್ದಾಗಿ ಹೇಳಲಾಗುತ್ತಿದೆ. ಇವರು ಕೊಳ್ಳೆಗಾಲದವರು. ಸ್ವರವಚನಗಳ ಸಂಗ್ರಹವಾದ ಸುಭೋದ ಸಾರ ಇವರ ಕೃತಿ. ಇವರು ನಿಜಗುಣ ಶಿವಯೋಗಿಗಳ ಸಮಕಾಲೀನರೆಂದು ವಿದ್ವಜ್ಜನರ ಅಭಿಪ್ರಾಯ.

**ಪದಗಳ ಅರ್ಥ**

1. ತಿರುಕ- ಭಿಕ್ಷುಕ. ಮುರುಕು- ಪಾಳುಬಿದ್ದ, ಮುರಿದು ಬಿದ್ದ; ಪುರ- ಪಟ್ಟಣ, ನಗರ; ಕರಿ- ಆನೆ; ಕುಸುಮಮಾಲೆ- ಹೂವಿನಮಾಲೆ, ಧರ್ಮಶಾಲೆ- ಅನ್ನಛತ್ರ.

2. ತೊಡರಿಸು-ಧರಿಸು, ಹಾಕು; ಪಟ್ಟ- ಸಿಂಹಾಸನ; ಒಡಯ- ರಾಜ, ದೊರೆ; ಮಾಳಪೆವು-ಮಾಡುವೆವು; ಒಡನೆ- ತಕ್ಷಣ; ಪೊಡವಿ- ರಾಜ್ಯ; ಆಣ್ಮ- ಒಡೆಯ, ರಾಜ, ಹಿಗ್ಗು- ಸಂತೋಷಪಡು, ಹರ್ಷಿಸು.

3. ನೃಪ- ರಾಜ, ದೊರೆ; ಭಟ್ಟಿನಿಗಳು- ಹೆಂಡತಿಯರು, ಪಟ್ಟಮಹಿಷಿಯಲ್ಲದ ರಾಣಿಯರು; ನಲ್ಲ- ಪ್ರಿಯತಮ.

4. ಓಲಗ- ರಾಜಸಭೆ; ಲೀಲೆ- ವಿನೋದ, ವಿಲಾಸ; ಚಾತುರಂಗ- ಸೈನ್ಯದ ನಾಲ್ಕು ಅಂಗಗಳು (ಆನೆ, ಕುದುರೆ, ರಥ, ಕಾಲಾಳಿನ ಬಲ) ಲೋಲ- ಉತ್ಸುಕ, ಸಂತೋಷ; ಸುತ- ಮಗ.

5. ಜೀಯ- ಸ್ವಾಮಿ, ಒಡೆಯ; ಸಕಲ- ಎಲ್ಲಾ; ಸಂಭ್ರಮ- ಹರ್ಷ, ಉಲ್ಲಾಸ; ಅಖಿಲ - ಸಕಲ, ಎಲ್ಲಾ; ರಾಯ- ರಾಜ, ಅರಸ; ಮೆಚ್ಚು- ಒಪ್ಪು, ಮೆಚ್ಚಿಕೊಳ್ಳು; ಅಂದದಿ- ರೀತಿಯಲ್ಲಿ.

6. ಧನ- ಹಣ, ಸಂಪತ್ತು; ಮದ- ಗರ್ವ, ಅಹಂಕಾರ; ತನುಜ-ಮಗ; ಜನಿತ- ಹುಟ್ಟು, ಜನ್ಮತಾಳು; ಅನಿತರೊಳಗೆ- ಅಷ್ಟರಲ್ಲಿ; ದಂಡು- ಸೈನ್ಯ; ಮುತ್ತು- ಆವರಿಸು, ಸುತ್ತುವರಿ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ತಿರುಕನು ಎಲ್ಲಿ ಕನಸನ್ನು ಕಂಡನು?

2. ಆನೆಯು ಯಾರ ಕೊರಳಿಗೆ ಮಾಲೆಯನ್ನು ಹಾಕಿತು?
3. ತಿರುಕನಿಗೆ ಪಟ್ಟವನ್ನು ಕಟ್ಟಿದವರು ಯಾರು?
4. ರಾಜ ಲೋಲನಾಗಿ ಮಂತ್ರಿಗೆ ಏನೆಂದು ನುಡಿದನು?
5. 'ತಿರುಕನ ಕನಸು' ಈ ಪದ್ಯವನ್ನು ಬರೆದ ಕವಿಯಾರು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಕರಿಯ ಕೈಗೆ ಕುಸುಮ ಮಾಲೆಯನ್ನು ಕೊಡಲು ಕಾರಣವೇನು?
2. ತಿರುಕ ಪೊಡವಿಯಾಣ್ಮನಾದುದು ಹೇಗೆ?
3. ಕನಸು ಕಾಣುತ್ತಿದ್ದ ತಿರುಕನು ಹೆದರಿ ಏಕೆ ಕಣ್ಣು ತೆರದನು?

**ಇ. ಐದಾರು ವಾಕ್ಯಗಳಲ್ಲಿ ಉತ್ತರಿಸಿ.**

1. ತಿರುಕನು ರಾಜನಾದದ್ದು ಹೇಗೆ?
2. ತಿರುಕನು ಕನಸಿನಲ್ಲಿ ರಾಜ್ಯವನ್ನು ಆಳಿದ ರೀತಿಯನ್ನು ವಿವರಿಸಿ.

**ಈ. ಈ ಪದ್ಯಭಾಗವನ್ನು ಪೂರ್ಣಗೊಳಿಸಿ.**

ಧನದ ಮದವು … ಹಿಗ್ಗುತಿರ್ದನು.

**ಉ. ಮಾದರಿಯಂತೆ ಕೊಟ್ಟಿರುವ ಪದಗಳನ್ನು ಬಿಡಿಸಿ ಬರೆಯಿರಿ.**

ಮಾದರಿ: ತಿರುಕನೊರ್ವನೂರಮುಂದೆ ತಿರುಕನು + ಒರ್ವನು + ಊರ + ಮುಂದೆ

1. ಒರಗಿರತ್ತಲೊಂದು
2. ವರಕುಮಾರರಿಲ್ಲದಿರಲು

## 8. ಅಭಿಮನ್ಯು ಪರಾಕ್ರಮ

ಕುಮಾರವ್ಯಾಸ

### ಪ್ರವೇಶ:

ನಿಶಾಂತನು ತರಗತಿಯಲ್ಲಿ ಅಧ್ಯಾಪಕರನ್ನು ಕೇಳಿದ "ನಮ್ಮ ಅಮ್ಮನಿಗೆ ಇವತ್ತು ನಾನು ಮನಸ್ಸು ಮಾಡಿದ್ರೆ 100 ಕೆ. ಜಿ. ಎತ್ತುತ್ತೇನೆ. ಅಂದೆ, ಅದಕ್ಕೆ ಅವರು ನಿಂದು ಉತ್ತರನ ಪೌರುಷ ಅಂದರು; ಹಾಗೆಂದರೇನು? ಎಂದು ಕೇಳಿದ. ಅಧ್ಯಾಪಕರು "ಉತ್ತರನ ಪೌರುಷ ಒಲೆಮುಂದೆ, ನಿನ್ನ ಪೌರುಷ ಎಲೆಮುಂದೆ" ಅಂತ ಗಾದೆ ಇದೆ. ಮಹಾಭಾರತದಲ್ಲಿ ಉತ್ತರಕುಮಾರ ಅಂತ ಒಬ್ಬ ಇದ್ದ. ತನ್ನ ರಾಜ್ಯದ ಹಸುಗಳನ್ನು ವೈರಿ ಸೈನಿಕರು ಮುತ್ತಿದ್ದಾರೆ ಎಂದು ತಿಳಿದಾಗ ಮನೆ ಒಳಗೆ ಕುಳಿತು, ನಾನು ಯುದ್ಧ ಮಾಡಿದರೆ ಹೇಗೆ ಗೆಲ್ಲುತ್ತೇನೆ ಎಂದೆಲ್ಲ ಜಂಭ ಕೊಚ್ಚಿಕೊಂಡ, ಆದರೆ ಯುದ್ಧರಂಗಕ್ಕೆ ಬಂದಾಗ ಅಪಾರ ಸೈನ್ಯ ನೋಡಿ ಹೆದರಿ ಓಡಿದ. ಅದಕ್ಕೆ ಯಾರಾದ್ರೂ ಕೊಚ್ಚಿಕೊಂಡರೆ ಉತ್ತರನ ಪೌರುಷ ಎನ್ನುತ್ತಾರೆ" ಎಂದು ಹೇಳಿದರು. ಅದಕ್ಕೆ ಸಿದ್ದಿಕ್ "ಟೀಚರ್, ಮಹಾಭಾರತದಲ್ಲಿ ಸಾಹಸಿ ಯುವಕರು ಇರಲಿಲ್ವೇ?" ಎಂದು ಕೇಳಿದ. ಟೀಚರ್ "ಯಾಕಿರಲಿಲ್ಲ, ಅಭಿಮನ್ಯು ಕುಮಾರ ಅಂತ ಇದ್ದ. ಅವನು ಸುಭದ್ರೆ ಮತ್ತು ಅರ್ಜುನರ ಮಗ. ಮಹಾ ಸಾಹಸಿ. ಮಹಾಭಾರತ ಯುದ್ಧದಲ್ಲಿ ದ್ರೋಣರು ಪದ್ಮವ್ಯೂಹ ರಚಿಸಿದಾಗ ಅದನ್ನು ಒಡೆಯಲು ತಾನೇ ಹೋಗುತ್ತೇನೆ ಅಂದ, ಹಾಗೆಯೇ ಹೋದ. ಆದರೆ ದುರದೃಷ್ಟ ಅವನಿಗೆ ಪೂರ್ಣವಾಗಿ ಪದ್ಮವ್ಯೂಹ ಒಡೆಯಲು ಆಗಲಿಲ್ಲ. ಆದರೆ ಅವನ ಧೈರ್ಯ, ಸಾಹಸ ಮೆಚ್ಚುವಂಥದ್ದು. ಹೇಳಿದ್ದನ್ನು ಸಾಧಿಸಲು ಅವನು ಮಾಡಿದ ಪ್ರಯತ್ನವನ್ನು ಮೆಚ್ಚಲೇಬೇಕು" ಅಂದರು. ಸಿಂಧು "ಅದನ್ನು ಸ್ವಲ್ಪ ವಿವರಿಸಿ ಟೀಚರ್" ಅಂದಳು. ಟೀಚರ್ ಎಲ್ಲ ವಿವರಿಸಲು ಸಮಯ ಕಡಿಮೆಯಿದೆ. ಕುಮಾರವ್ಯಾಸ ಎಂಬ ಕವಿ ಕನ್ನಡದಲ್ಲಿ ಮಹಾಭಾರತವನ್ನು 'ಕರ್ಣಾಟ ಭಾರತ ಕಥಾಮಂಜರಿ' ಎಂಬ ಹೆಸರಿನಲ್ಲಿ ರಚಿಸಿದ್ದಾನೆ. ಅದರಲ್ಲಿ ಅಭಿಮನ್ಯುವಿನ ಮಾತುಗಳು ಬರುತ್ತವೆ. ಆ ಭಾಗ ಓದೋಣ" ಎಂದರು.



ಜನಪನಂಘ್ರಿಗೆ ಮಣಿದು ಕೈ ಮುಗಿ
ದೆನಗೆ ಬೆಸಸೈ ಬೊಪ್ಪ ತಾ ಬ
ಲ್ಲೆನು ಮಹಾಹವದೊಳಗೆ ಪದ್ಮವ್ಯೂಹ ಭೇದನವ
ಅನುವರವ ಗೆಲುವೆನು ಕೃತಾಂತನ

ಮನೆಗೆ ಕಳುಹುವೆನಹಿತರನು ನೀ
ನಿನಿತು ಚಿಂತಿಸಲೇಕೆ ಕಾಳಗಕೆನ್ನ ಕಳುಹೆಂದ

ಹಸುಳೆಯದಟಿನ ನುಡಿಯಕೇಳಿದು
ನಸುನಗುತ ಧರ್ಮಜನು ಘನ ಪೌ
ರುಷವು ನಿನಗುಂಟೆಂದು ಕಂದನ ತೆಗೆದು ಬಿಗಿದಪ್ಪಿ
ಶಿಶುವು ನೀನೆಲೆ ಮಗನೆ ಕಾದುವ
ರಸಮಬಲರು ಕಣಾ ಮಹಾರಥ
ರೆಸುಗೆಯ ನೀನೆಂತು ಸೈರಿಸಲಾಪೆ ಹೇಳೆಂದ

ಬಿಡು ಮರೀಚಿಯ ತೊರೆಗೆ ಹರುಗೋ
ಲಿಡುವರುಂಟೇ ಲೆಪ್ಪದುರುಗನ
ಹಿಡಿಯಲೇತಕೆ ಗರುಡ ಮಂತ್ರವು ಚಪಲನೆನ್ನದಿರು
ಕೊಡನ ಮಗನ ಕುಮಂತ್ರದೊಡ್ಡಿನ
ಕಡಿತಕಾನಂಜುವೆನೆ ವೆಗ್ಗಳ
ನುಡಿಯಲಮ್ಮೆನು ತನ್ನನೀಗಳೆ ಬಿಟ್ಟು ನೋಡೆಂದ

ಕಂದ ವೈರಿವ್ಯೂಹವಸದಳ
ವೆಂದೆನಿಪುದದರೊಳಗೆ ಕೃಪ ಗುರು
ನಂದನರು ರಾಧೇಯ ಭೂರಿಶ್ರವ ಜಯದ್ರಥರು
ಇಂದುಧರನಡಹಾಯ್ದರೊಮ್ಮಿಗೆ
ಹಿಂದುಮುಂದೆನಿಸುವರು ನೀಗೆಲು
ವಂದವೆಂತೈ ಸಮರವಿದು ಸಾಮಾನ್ಯವಲ್ಲೆಂದ

ಗಾಳಿಬೆಮರುವುದುಂಟೆ ವಹ್ನಿ
ಜ್ವಾಲೆ ಹಿಮಕಂಜುವುದೆ ಮಂಜಿನ
ಮೇಲುಗಾಳೆಗವುಂಟೆ ಬಲುಬೇಸಗೆಯ ಬಿಸಿಲೊಳಗೆ
ಬಾಲನಿವನೆನ್ನದಿರು ದುಗುಡವ
ತಾಳಲಾಗದು ಬೊಪ್ಪ ನಿಮ್ಮಡಿ
ಯಾಲಿಗಳಿಗೌತಣವನಿಕ್ಕುವೆನೊರಸಿ ರಿಪುಬಲವ

ಅರಿಬಲವ ನೀ ಖಂಡಿಗೆಳೆ ಮೋ
ಹರಸಹಿತ ನಾ ಬಹೆನು ನಡೆ ಯೆಂ
ದರಸನಭಿಮನ್ಯುವಿಗೆ ನೇಮವ ಕೊಟ್ಟನಾಹವಕೆ
ಜನಪನಂಘ್ರಿಗೆ ಮಣಿದು ಕೈ ಮುಗಿ
ದೆನಗೆ ಬೆಸಸೈ ಬೊಪ್ಪ ತಾ ಬ
ಲ್ಲೆನು ಮಹಾಹವದೊಳಗೆ ಪದ್ಮವ್ಯೂಹ ಭೇದನವ

## ಮರು ಓದು

1. (ಅಭಿಮನ್ಯು) ಜನಪನ ಅಂಘ್ರಿಗೆ ಮಣಿದು, ಕೈ ಮುಗಿದು, "ಎನಗೆ ಬೆಸಸೈ ಬೊಪ್ಪ, ತಾ ಬಲ್ಲೆನು ಮಹಾ ಆಹವದ ಒಳಗೆ ಪದ್ಮವ್ಯೂಹ ಭೇದನವ. ಅನುವರವ ಗೆಲುವೆನು, ಕೃತಾಂತನ ಮನೆಗೆ ಕಳುಹುವೆನು ಅಹಿತರನು, ನೀನು ಇನಿತು ಚಿಂತಿಸಲೇಕೆ ಕಾಳಗಕೆ ಎನ್ನ ಕಳುಹು" ಎಂದ.

2. ಹಸುಳೆಯ ಅದಟಿನ ನುಡಿಯ ಕೇಳಿದು ನೆಸುನಗುತ ಧರ್ಮಜನು “ಘನ ಪೌರುಷವು ನಿನಗೆ ಉಂಟು'' ಎಂದು ಕಂದನ ತೆಗೆದು ಬಿಗಿದು ಅಪ್ಪಿ “ಶಿಶುವು ನೀನೆಲೆ ಮಗನೆ, ಕಾದುವರು ಅಸಮಬಲರು ಕಣಾ, ಮಹಾರಥರ ಎಸುಗೆಯನು ನೀನು ಎಂತು ಸೈರಿಸಲು ಆಪೆ? ಹೇಳು'' ಎಂದ.

3. “ಬಿಡು ಮರೀಚಿಯ ತೊರೆಗೆ ಹರುಗೋಲ ಇಡುವರು ಉಂಟೇ, ಲೆಪ್ಪದ ಉರುಗನ ಹಿಡಿಯಲು ಏತಕೆ ಗರುಡ ಮಂತ್ರವು, ಚಪಲನು ಎನ್ನದಿರು, ಕೊಡನ ಮಗನ ಕುಮಂತ್ರದ ಒಡ್ಡಿನ ಕಡಿತಕೆ ಆನು ಅಂಜುವೆನೆ? ವೆಗ್ಗಳ ನುಡಿಯಲು ಅಮ್ಮನು ತನ್ನನ್ನು ಈಗಳೆ ಬಿಟ್ಟು ನೋಡು ಎಂದ.

4. “ಕಂದ, ವೈರಿವ್ಯೂಹ ಅಸದಳ ಎಂದು ಎನಿಪುದು. ಅದರೊಳಗೆ ಕೃಪ- ಗುರುನಂದನರು, ರಾಧೇಯ, ಭೂರಿಶ್ರವ, ಜಯದ್ರಥರು ಇಂದುಧರನು ಅಡಹಾಯ್ದರೂ ಒಮ್ಮೆಗೆ ಹಿಂದುಮುಂದು ಎನಿಸುವರು, ನೀನು ಗೆಲುವ ಅಂದವು ಎಂತೈ? ಸಮರವಿದು ಸಾಮಾನ್ಯವಲ್ಲ!'' ಎಂದ.

5. “ಗಾಳಿ ಬೆಮರುವುದು ಉಂಟೆ? ವಹ್ನಿಜ್ವಾಲೆ ಹಿಮಕೆ ಅಂಜುವುದೆ? ಮಂಜಿನ ಮೇಲುಗಾಳೆಗ ಉಂಟೆ ಬಲುಬೇಸಗೆಯ ಬಿಸಿಲ ಒಳಗೆ? ಬಾಲನು ಇವನು ಎನ್ನದಿರು, ದುಗುಡವ ತಾಳಲಾಗದು ಬೊಪ್ಪ, ನಿಮ್ಮಡಿ ಆಲಿಗಳಿಗೆ ಔತಣವನು ಇಕ್ಕುವೆನು ಒರಸಿ ರಿಪುಬಲವ!''

6. “ಅರಿಬಲವ ನೀ ಖಂಡಿಗೆಳೆ, ಮೋಹರಸಹಿತ ನಾ ಬಹೆನು ನಡೆ'' ಎಂದು ಅರಸನು ಅಭಿಮನ್ಯುವಿಗೆ ನೇಮವ ಕೊಟ್ಟನು ಆಹವಕೆ. ಜನಪನ ಅಂಘ್ರಿಗೆ ಮಣಿದು, ಕೈ ಮುಗಿದು, “ಎನಗೆ ಬೆಸಸೈ ಬೊಪ್ಪ ತಾ ಬಲ್ಲೆನು ಮಹಾ ಆಹವದ ಒಳಗೆ ಪದ್ಮವ್ಯೂಹ ಭೇದನವ!”

**ಕ್ಷೇತ್ರ:** ಓದುವುದು, ಬರೆಯುವುದು.

**ಸಾಮರ್ಥ್ಯ:** ಛಂದಶ್ಶಾಸ್ತ್ರದ ಪ್ರಾಸ, ಮಾತ್ರೆ, ಗಣ ಇವುಗಳ ಪರಿಚಯ ಮಾಡಿಕೊಳ್ಳುವುದು. ಲೇಖನ ಚಿಹ್ನೆ ಮತ್ತು ಛಂದೋವಿನ್ಯಾಸಗಳನ್ನು ಅರಿತು ಓದುವುದು.

## ಆಶಯ:

ಅಭಿಮನ್ಯುವಿನ ಸಾಹಸದ ಮಾತುಗಳನ್ನು ಆತ ಮಂಡಿಸುವ ರೀತಿಯನ್ನು ತಿಳಿಯಬೇಕು. ವೀರನಾದರೂ ನಯವಂತ ಮಾತುಗಳು, ಮಾತುಗಳಲ್ಲಿ ಪರಿಣಾಮ ಕಾರಿಯಾದ ಉಪಮೆ, ರೂಪಕಗಳ ಬಳಕೆ ಇವುಗಳನ್ನು ಅಭಿಮನ್ಯುವಿನ ಮಾತುಗಳಲ್ಲಿ ಗಮನಿಸಬೇಕು. ಅವನ ಮಾತಿನಲ್ಲಿ ಇರುವ ಆತ್ಮಸ್ಥೈರ್ಯ ಮೆಚ್ಚುವಂಥದ್ದು. ಧೈರ್ಯ ಮನುಷ್ಯನಿಗೆ ಅಗತ್ಯ. ಧೈರ್ಯದಿಂದ ಮುನ್ನುಗ್ಗಲು ಕಲಿಯಬೇಕು. ಮೊದಲು ಯಾವುದೇ ಕೌಶಲವನ್ನು ಚೆನ್ನಾಗಿ ಕಲಿಯಬೇಕು ನಂತರ ಸಾಹಸವನ್ನು ಪ್ರದರ್ಶಿಸಬೇಕು. ಯಾವುದೇ ವಿದ್ಯೆಯನ್ನು ಪೂರ್ಣವಾಗಿ ತಿಳಿಯಲು ಪ್ರಯತ್ನಿಸಬೇಕು.

## ಕೃತಿಕಾರರ ಪರಿಚಯ



ಕುಮಾರವ್ಯಾಸನ ಮೂಲ ಹೆಸರು ನಾರಣಪ್ಪ. "ಗದುಗಿನ ನಾರಣಪ್ಪ" ಎಂದು ಸಾಮಾನ್ಯವಾಗಿ ಕುಮಾರವ್ಯಾಸನನ್ನು ಕರೆಯಲಾಗುತ್ತದೆ. ಕವಿಯ ಕಾವ್ಯನಾಮ ಕುಮಾರವ್ಯಾಸ. ಕಾಲ ಸುಮಾರು ಕ್ರಿ. ಶ. 1430 ಎಂದು ನಿಗದಿಪಡಿಸಲಾಗಿದೆ.

ಕುಮಾರವ್ಯಾಸ ಕವಿಯ ಹುಟ್ಟೂರು ಈಗಿನ ಗದಗ ಜಿಲ್ಲೆಯಲ್ಲಿರುವ ಕೋಳಿವಾಡ ಗ್ರಾಮ. ಕಾವ್ಯರಚನೆಯನ್ನು ಮಾಡಿದ್ದು ಗದುಗಿನ ವೀರನಾರಾಯಣನ ಗುಡಿಯಲ್ಲಿ. ಈಗಲೂ ಸಹ ಆ ಗುಡಿಯಲ್ಲಿರುವ ಒಂದು ಕಂಬಕ್ಕೆ ಕುಮಾರವ್ಯಾಸನ ಕಂಬ ಎಂದು ಕರೆಯಲಾಗುತ್ತದೆ. ಕುಮಾರವ್ಯಾಸ ಈ ಕಂಬದ ಅಡಿಯಲ್ಲೇ ಈ ಕಾವ್ಯವನ್ನು ರಚಿಸಿ ಓದುತ್ತಿದ್ದ ಎಂಬ ಪ್ರತೀತಿ ಇದೆ.

ಕುಮಾರವ್ಯಾಸನ ಪ್ರಸಿದ್ಧ ಕೃತಿ ಕರ್ಣಾಟ ಭಾರತ ಕಥಾಮಂಜರಿ. ಇದಕ್ಕೆ ಗದುಗಿನ ಭಾರತ, ಕನ್ನಡ ಭಾರತ, ಕುಮಾರವ್ಯಾಸ ಭಾರತ ಎಂದೂ ಕರೆಯಲಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಮೇರುಕೃತಿಯಾಗಿ ಪರಿಗಣಿತವಾಗಿರುವ ಕನ್ನಡ ಭಾರತ ಹತ್ತು ಪರ್ವಗಳನ್ನು ಒಳಗೊಂಡಿದೆ. ಸಂಪೂರ್ಣ ಕಾವ್ಯ ಭಾಮಿನಿ ಷಟ್ಪದಿ ಛಂದಸ್ಸಿನಲ್ಲಿ ರಚಿತವಾಗಿದೆ. ಕವಿಯ ಕಾವ್ಯಪ್ರತಿಭೆ ಪೂರ್ಣಶಕ್ತಿಯಲ್ಲಿ ಹೊರಹೊಮ್ಮುವುದು ರೂಪಕಗಳಲ್ಲಿ. ಇದೇ ಕಾರಣಕ್ಕಾಗಿ ಕುಮಾರವ್ಯಾಸ ರೂಪಕ ಸಾಮ್ರಾಜ್ಯ ಚಕ್ರವರ್ತಿ ಎಂಬ ಖ್ಯಾತಿ ಪಡೆದಿದ್ದಾರೆ. ಕುಮಾರವ್ಯಾಸ ಈ ಪ್ರತಿಭೆಗೆ ಕನ್ನಡಿಯಾಗಿ ರಾಷ್ಟ್ರಕವಿ ಕುವೆಂಪು ಅವರ ಈ ಸಾಲುಗಳನ್ನು ನೋಡಿ.

ಕುಮಾರವ್ಯಾಸನು ಹಾಡಿದನೆಂದರೆ

ಕಲಿಯುಗ ದ್ವಾಪರವಾಗುವುದು

ಭಾರತ ಕಣ್ಣಲಿ ಕುಣಿಯುವುದು ಮೈಯ್ಯಲಿ

ಮಿಂಚಿನ ಹೊಳೆ ತುಳುಕಾಡುವುದು

## ಪದಗಳ ಅರ್ಥ

1. ಜನಪ- ರಾಜ (ಇಲ್ಲಿ ಧರ್ಮರಾಯ); ಅಂಘ್ರಿ- ಪಾದ; ಮಣಿ ನಮಸ್ಕರಿಸು; ಬೆಸಸು- ಅಪ್ಪಣೆಮಾಡು; ಬೊಪ್ಪ- ತಂದೆ, (ಇಲ್ಲಿ ದೊಡ್ಡಪ್ಪ); ಆಹವ- ಯುದ್ಧ; ಭೇದನ- ಮುರಿಯುವುದು; ಅನುವರ- ಯುದ್ಧ; ಕೃತಾಂತ- ಯಮ; ಅಹಿತರು-ಹಿತವಲ್ಲದವರು, ವೈರಿಗಳು; ಕಾಳಗ- ಯುದ್ಧ.

2. ಹಸುಳೆ- ಮಗು; ಅದಟು- ಪರಾಕ್ರಮ,ಶೌರ್ಯ; ಘನ- ದೊಡ್ಡ; ಶಿಶು- ಮಗು; ಕಾದುವರು- ಯುದ್ಧ ಮಾಡುವವರು; ಅಸಮಬಲ- ಸಮಾನವಲ್ಲದ ಶಕ್ತಿ ಉಳ್ಳವರು; ಎಸುಗೆ- ಬಾಣ ಪ್ರಯೋಗ; ಸೈರಿಸು- ತಡೆದುಕೊಳ್ಳು; ಆಪೆ- ಸಮರ್ಥನಾಗುವೆ.

3. ತೊರೆ- ನದಿ, ಹೊಳೆ; ಮರೀಚಿ- ಮೃಗಜಲ (ನೀರು ಎಂಬ ಭ್ರಮೆಯ ಸೃಷ್ಟಿ) ಹರುಗೋಲ- ಹರಿಗೋಲು- ನಾವೆ, ದೋಣಿ; ಲೆಪ್ಪ- ವಿಗ್ರಹಗಳನ್ನು ಮಾಡಲು ಬಳಸುವ ಎರಕ; ಉರಗ- ಹಾವು; ಕೊಡನ ಮಗ- ದ್ರೋಣ; ಕುಮಂತ್ರ- ಮೋಸದ ಆಲೋಚನೆ; ದಂಡು- ಸೈನ್ಯ; ಅಂಜು- ಹೆದರು; ವೆಗ್ಗಳ- ಅತಿಯಾಗಿ; ಅಮ್ಮೆ- ಸಾಧ್ಯವಿಲ್ಲ.

4. ವೈರಿ –ಶತ್ರು; ವ್ಯೂಹ- ಸೈನ್ಯವನ್ನು ಒಂದು ವಿಶಿಷ್ಟ ರೀತಿಯಲ್ಲಿ ನಿಲ್ಲಿಸುವ ಕ್ರಮ; ಅಸದ- ಅಸಾಧ್ಯ, ಅತಿಶಯ; ಇಂದುಧರ- ಚಂದ್ರನನ್ನು ಧರಿಸಿರುವವ, ಶಿವ; ಅಡಹಾಯ್ದರೂ- ಮೇಲೆ ಬಿದ್ದು ಬಂದರೂ; ಸಮರ- ಯುದ್ಧ.

5. ಬೆಮರು- ಬೆವರು; ವಹ್ನಿಜ್ವಾಲೆ- ಬೆಂಕಿಯ ಜ್ವಾಲೆ; ಹಿಮ- ಚಳಿಗಾಲ, ಮಂಜಿನ ಹನಿ; ಅಂಜು- ಹೆದರು; ಮಂಜು- ಇಬ್ಬನಿ, ಮೇಲುಗಾಳೆಗ- ಸ್ಪರ್ಧಾತ್ಮಕವಾದ ಯುದ್ಧ; ದುಗುಡ- ಚಿಂತೆ, ಆತಂಕ; ನಿಮ್ಮಡಿ ಆಲಿ- ನಿಮ್ಮ ಕಣ್ಣುಗಳಿಗೆ; ಔತಣ- ವಿಶೇಷ ಭೋಜನ; ಇಕ್ಕು- ಇಡು, ಬಡಿಸು; ಒರಸಿ- ನಾಶಮಾಡಿ; ರಿಪುಬಲ- ವೈರಿ ಸೈನ್ಯ.

6. ಅರಿಬಲ- ವೈರಿ ಸೈನ್ಯ; ಖಂಡಿಗೆಳೆ- ನಾಶಪಡಿಸು; ಮೋಹರ- ಸೈನ್ಯ; ನೇಮ-ಅಪ್ಪಣೆ; ಆಹವ- ಯುದ್ಧ.

## ಪೂರಕ ಟಿಪ್ಪಣಿ

ಅಭಿಮನ್ಯು- ಅರ್ಜುನ-ಸುಭದ್ರೆಯರ ಮಗ, ಇವನಿಗೆ ಪದ್ಮವ್ಯೂಹವನ್ನು ಭೇದಿಸಿ ಒಳಗೆ ಹೋಗುವುದು ತಿಳಿದಿತ್ತು. ಅಲ್ಲಿಂದ ಬಿಡಿಸಿಕೊಂಡು ಬರುವುದು ತಿಳಿದಿರಲಿಲ್ಲ. ಆದರೂ ಹೋರಾಟಕ್ಕೆ ಇಳಿಯುತ್ತಾನೆ.

ಧರ್ಮರಾಯ- ಪಾಂಡವರಲ್ಲಿ ಹಿರಿಯವ.

ಪದ್ಮವ್ಯೂಹ- ಯುದ್ಧದಲ್ಲಿ ಕಮಲದ ಆಕಾರದಲ್ಲಿ ರಚಿಸಿದ ಸೈನ್ಯವ್ಯವಸ್ಥೆ. (ಚಕ್ರವ್ಯೂಹ)

ಮಹಾರಥರು- ರಥದಲ್ಲಿದ್ದುಕೊಂಡು ಏಕಾಂಗಿಯಾಗಿ ಹತ್ತು ಸಾವಿರ ಸೈನಿಕರೊಡನೆ ಯುದ್ಧ ಮಾಡುವ ಸಾಹಸಿಗಳು.

ಮರೀಚಿ- ಬಿಸಿಲು ಕುದುರೆ, ಮೃಗಜಲ, ಬಿಸಿಲಿನ ಸಂದರ್ಭದಲ್ಲಿ ದೂರದಲ್ಲಿ ನೀರು ಇದ್ದಂತೆ ಕಣ್ಣಿಗೆ ಗೋಚರವಾಗುತ್ತದೆ, ಹತ್ತಿರದಲ್ಲಿ ಹೋಗಿ ನೋಡಿದರೆ ನೀರಿರುವುದಿಲ್ಲ. ಅದು ಮರೀಚಿ ಅಥವಾ ಮರೀಚಿಕೆ.

ಗರುಡ ಮಂತ್ರ- ಹಾವಿಗೂ ಗರುಡನಿಗೂ ವೈರ ಎಂಬ ನಂಬುಗೆಯಿದೆ, ಹಾವನ್ನು ಹಿಡಿಯಲು

ಬಳಸುವ ಮಂತ್ರ.

ಕೊಡನ ಮಗ- ದ್ರೋಣ, ಕೊಡದಲ್ಲಿ ಹುಟ್ಟಿದ ಎಂಬುದು ಪ್ರತೀತಿ. ಕೌರವರು ಮತ್ತು ಪಾಂಡವರಿಗೆ ವಿದ್ಯೆಹೇಳಿಕೊಟ್ಟ ಗುರು.

ಕೃಪ- ಕೃಪಾಚಾರ್ಯ, ಕೌರವರು ಮತ್ತು ಪಾಂಡವರಿಗೆ ಬಿಲ್ಲು ವಿದ್ಯೆಹೇಳಿಕೊಟ್ಟ ಗುರು.

ಗುರುನಂದನ- ದ್ರೋಣನ ಮಗನಾದ ಅಶ್ವತ್ಥಾಮ.

ರಾಧೇಯ- ಕರ್ಣ, ಕರ್ಣ ರಾಧೆಯ ಸಾಕುಮಗ.

ಭೂರಿಶ್ರವ- ಮಹಾಭಾರತದ ಯುದ್ಧದಲ್ಲಿ ದುರ್ಯೋಧನನಿಗೆ ಸೈನ್ಯದ ನೆರವು ನೀಡಿದ್ದಲ್ಲದೆ

ಅವನ ಪರವಾಗಿ ಯುದ್ಧವನ್ನು ಮಾಡಿದ ಯಾದವ ವೀರ.

ಜಯದ್ರಥ- ದುರ್ಯೋಧನನ ಪರವಾಗಿ ಯುದ್ಧವನ್ನು ಮಾಡಿದವನು. ದುರ್ಯೋಧನನ ತಂಗಿ ದುಶ್ಶಳೆಯ ಪತಿ.

## ಪೂರ್ವ ಕಥೆ

ಮಹಾಭಾರತದಲ್ಲಿ ಪಾಂಡವರು ಮತ್ತು ಕೌರವರು ರಾಜ್ಯಕ್ಕಾಗಿ ಹೋರಾಟ ಮಾಡಿದ ಕಥೆಯಿದೆ. ಇಬ್ಬರ ನಡುವಿನ ಯುದ್ಧವನ್ನು ಕುರುಕ್ಷೇತ್ರ ಯುದ್ಧ ಎಂದು ಕರೆಯಲಾಗುತ್ತದೆ. ಈ ಕುರುಕ್ಷೇತ್ರ ಯುದ್ಧದಲ್ಲಿ ಕೌರವರ ಕಡೆ ಭೀಷ್ಮ ಮೊದಲ ಸೇನಾಧಿಪತಿಯಾಗಿರುತ್ತಾನೆ. ಅವನ ನಂತರ ದ್ರೋಣ ಸೇನಾಧಿಪತಿಯಾಗುತ್ತಾನೆ. ದ್ರೋಣ ಪಾಂಡವರನ್ನು ಗೆಲ್ಲಲು ಪದ್ಮವ್ಯೂಹವನ್ನು ರಚಿಸುತ್ತಾನೆ. ಈ ವ್ಯೂಹವನ್ನು ಭೇದಿಸಲು ಪಾಂಡವರ ಕಡೆಯಲ್ಲಿ ಕೃಷ್ಣ ಮತ್ತು ಅರ್ಜುನರಿಗೆ ಮಾತ್ರ ತಿಳಿದಿರುತ್ತದೆ. ಆದರೆ ಅವರಿಬ್ಬರೂ ಯುದ್ಧಕ್ಕಾಗಿ ಬಹುದೂರಕ್ಕೆ ಹೋಗಿರುತ್ತಾರೆ. ಅವರು ಬರುವವರೆಗೆ ಯುದ್ಧವನ್ನು ನಡೆಸುವುದು ಅನಿವಾರ್ಯವಾಗಿರುತ್ತದೆ. ಧರ್ಮರಾಯನಿಗೆ ಚಿಂತೆಯಾಗುತ್ತದೆ. ಕೃಷ್ಣಾರ್ಜುನರನ್ನು ಬಿಟ್ಟರೆ ಅಭಿಮನ್ಯುವಿಗೆ ಪದ್ಮವ್ಯೂಹ ಭೇದಿಸುವ ವಿದ್ಯೆ ಅರ್ಧ ಮಾತ್ರ ಗೊತ್ತಿರುತ್ತದೆ. ಅವನಿಗೆ ವ್ಯೂಹವನ್ನು ಭೇದಿಸುತ್ತಾ ಒಳಗೆ ಹೋಗುವುದು ಗೊತ್ತು. ಆದರೆ ಅದರಿಂದ ಬಿಡಿಸಿಕೊಂಡು ಹೊರಬರುವುದು ತಿಳಿದಿಲ್ಲ. ಇಂಥ ಸಂದರ್ಭದಲ್ಲಿ ಅಭಿಮನ್ಯು ದೊಡ್ಡಪ್ಪನಾದ ಧರ್ಮರಾಯನನ್ನು ಭೇಟಿಯಾಗುತ್ತಾನೆ.

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಧರ್ಮರಾಯನಿಗೆ ನಮಸ್ಕರಿಸಿದ ಅಭಿಮನ್ಯು ಹೇಳುವುದೇನು?
2. ಅಭಿಮನ್ಯುವಿನ ಮಾತನ್ನು ಕೇಳಿ ಧರ್ಮರಾಯ ಏನು ಹೇಳುತ್ತಾನೆ?
3. ಧರ್ಮರಾಯನ ಮಾತಿಗೆ ಅಭಿಮನ್ಯು ಕೊಡುವ ಉತ್ತರವೇನು?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು-ವಾಕ್ಯಗಳಲ್ಲಿ ಉತ್ತರಿಸಿರಿ.**

1. ಲೆಪ್ಪದುರುಗನ ಹಿಡಿಯಲೇತಕೆ ಗರುಡಮಂತ್ರವು-ಎಂದರೇನು?
2. ನಿಮ್ಮ ಆಲಿಗಳಿಗೆ ಏನು ಇಕ್ಕುವೆ ಎಂದು ಅಭಿಮನ್ಯು ಹೇಳುತ್ತಾನೆ?
3. ವೈರಿವ್ಯೂಹದೊಳಗೆ ಇರುವ ವೀರರು ಯಾರು?

**ಇ. ಕೆಳಗಿನ ವಾಕ್ಯಗಳನ್ನು ಯಾರು, ಯಾರಿಗೆ ಹೇಳಿದರು? ತಿಳಿಸಿ.**

1. ಶಿಶುವು ನೀನೆಲೆ ಮಗನೆ ಕಾದುವರಸಮುಬಲರು ಕಣಾ!
2. ಕೊಡನ ಮಗನ ಕುಮಂತ್ರದೊಡ್ಡಿನ ಕಡಿತಕಾನಂಜುವೆನೆ?
3. ನೀಗೆಲುವಂದವೆಂತೈ ಸಮರವಿದು ಸಾಮಾನ್ಯವಲ್ಲೆಂದ.
4. ಬಾಲನಿವನೆನ್ನದಿರು ದುಗುಡವ ತಾಳಲಾಗದು ಬೊಪ್ಪ.

**ಈ. 'ಅ' ಪಟ್ಟಿಯಲ್ಲಿನ ಪದಗಳಿಗೆ 'ಆ' ಪಟ್ಟಿಯಲ್ಲಿ ಅರ್ಥ ನೀಡಲಾಗಿದೆ. ಪಟ್ಟಿಗಳ ಪದಗಳನ್ನು ಹೊಂದಿಸಿ ಬರೆಯಿರಿ.**

| **'ಅ' ಪಟ್ಟಿ** | **'ಆ' ಪಟ್ಟಿ** |
|---|---|
| 1. ಅದಟು | a. ಅಪ್ಪಣೆ |
| 2. ಸೈರಿಸಲಾಪೆ | b. ನಾಶಮಾಡು |
| 3. ಅಮ್ಮೆನು | c. ಪರಾಕ್ರಮ |
| 4. ಅಸದಳ | d. ಸಾಧ್ಯವಾಗುವುದಿಲ್ಲ |
| 5. ಖಂಡಿಗೆಳೆ | e. ಅಸಾಧ್ಯ |
| 6. ನೇಮ | f. ತಡೆದುಕೊಳ್ಳಲು ಸಾಧ್ಯ |

**ಉ. ಈ ವಾಕ್ಯವನ್ನು ಹೊಸಗನ್ನಡಕ್ಕೆ ಪರಿವರ್ತಿಸಿ, ಭಾಷೆಯಲ್ಲಾದ ಬದಲಾವಣೆಗಳನ್ನು ಗುರುತಿಸಿ.**

(ಅಭಿಮನ್ಯು) ಜನಪನ ಅಂಘ್ರಿಗೆ ಮಣಿದು, ಕೈ ಮುಗಿದು, "ಎನಗೆ ಬೆಸಸೈ ಬೊಪ್ಪ, ಮಹಾ ಆಹವದ ಒಳಗೆ ಪದ್ಮವ್ಯೂಹ ಭೇದನವ ತಾ ಬಲ್ಲೆನು. ಅನುವರವ ಗೆಲುವೆನು, ಅಹಿತರನು ಕೃತಾಂತನ ಮನೆಗೆ ಕಳುಹುವೆನು, ನೀನ್ ಇನಿತು ಚಿಂತಿಸಲೇಕೆ ಕಾಳಗಕೆ ಎನ್ನ ಕಳುಹು" ಎಂದ.

**ಚಟುವಟಿಕೆ:** ಪದ್ಯದಲ್ಲಿರುವ ಈ ಸಾಲುಗಳನ್ನು ಓದಿ-ಅರ್ಥಮಾಡಿಕೊಳ್ಳಿ

1. ವಿಷಯವನ್ನು ಮನಸ್ಸಿಗೆ ನಾಟುವಂತೆ ಮಾಡಲು ಅದೇ ರೀತಿಯ ಮತ್ತೊಂದು ವಿಷಯದ ಮೂಲಕ ಹೇಳುವುದನ್ನು ರೂಪಕ ಎನ್ನುತ್ತಾರೆ. ಅಭಿಮನ್ಯು ಧರ್ಮರಾಯನಿಗೆ ತನ್ನ ಧೈರ್ಯ ಪರಾಕ್ರಮ ಸಾಹಸಗಳನ್ನು ತಿಳಿಸಲು ಬಳಸುವ ರೂಪಕಗಳನ್ನು ಕೆಳಗೆ ನೀಡಲಾಗಿದೆ. ಇವುಗಳನ್ನು ಅರ್ಥ ಮಾಡಿಕೊಂಡು ವಿವರಿಸಿರಿ.

1. ಮರೀಚಿಯ ತೊರೆಗೆ ಹರುಗೋಲಿಡುವರುಂಟೇ
2. ಲೆಪ್ಪದುರುಗನ ಹಿಡಿಯಲೇತಕೆ ಗರುಡಮಂತ್ರವು

3. ಗಾಳಿಬೆಮರುವುದುಂಟೆ
4. ವಹ್ನಿಜ್ವಾಲೆ ಹಿಮಕಂಜುವುದೆ
5. ಮಂಜಿನ ಮೇಲುಗಾಳೆಗವುಂಟೆ ಬಲುಬೇಸಗೆಯ ಬಿಸಿಲೊಳಗೆ

2. ಕೆಳಗೆ ನೀಡಿರುವ ಪದಗಳು ಇಂದಿನ ಕನ್ನಡದಲ್ಲಿ ಬಳಕೆಯಲ್ಲಿಲ್ಲ. 15-16 ನೆಯ ಶತಮಾನದಲ್ಲಿ ಬಳಕೆಯಲ್ಲಿದ್ದವು. ಇಂಥ ಕನ್ನಡವನ್ನು ಸೇರಿದಂತೆ ಇರುವ ಕನ್ನಡ ಭಾಷೆಯನ್ನು ನಡುಗನ್ನಡ ಭಾಷೆ ಎಂದು ಕರೆಯುತ್ತೇವೆ.

ಬೆಸಸ್ಸೈ- ಹೇಳಿ, ಅಪ್ಪಣೆ ಮಾಡಿ. ಅದಟು- ಪರಾಕ್ರಮ, ಶೌರ್ಯ. ಕೇಳಿದು- ಕೇಳಿ. ಸೈರಿ ಸಲಾಪೆ- ತಡೆದುಕೊಳ್ಳಲು ಸಾಧ್ಯ. ಅಮ್ಮೆನು- ಸಾಧ್ಯವಾಗುವುದಿಲ್ಲ. ಅಸದಳ- ಅಸಾಧ್ಯ. ಅಡಹಾಯ್ದು- ಮೇಲೆತ್ತಿ ಬಂದರೂ. ಹಿಂದುಮುಂದು- ತಬ್ಬಿಬ್ಬಾಗು. ಎಂತೈ- ಹೇಗೆ. ನಿಮ್ಮಡಿ- ನಿಮ್ಮಲ್ಲಿ. ಖಂಡಿಗೆಳೆ- ನಾಶಮಾಡು. ನೇಮವ- ಅಪ್ಪಣೆಯನ್ನು.

1. ಮಹಾಭಾರತದಲ್ಲಿ ಬರುವ ವಿವಿಧ ಪುರಾಣ ಪಾತ್ರಗಳ ಹೆಸರುಗಳನ್ನು ಪಟ್ಟಿ ಮಾಡಿ ಸ್ನೇಹಿತರೊಂದಿಗೆ ಹಂಚಿಕೊಂಡು ಆಕಾರಾದಿಯಾಗಿ ಪಟ್ಟಿ ಮಾಡಿ.

## ಛಂದಸ್ಸು

ಕಾವ್ಯ, ಕವನ, ಕವಿತೆ ಎಂದು ಓದುತ್ತೇವಲ್ಲ ಇದು ತನ್ನ ಸ್ವರೂಪದಲ್ಲಿ ಹೇಗಿರುತ್ತದೆ ಎಂಬುದನ್ನು ತಿಳಿಸುವುದು ಛಂದಸ್ಸು. ಈ ಛಂದಸ್ಸಿನಲ್ಲಿ ಹಲವು ವಿಚಾರಗಳಿವೆ. ನಾವಿಲ್ಲಿ ಮಾತ್ರಾ ಛಂದಸ್ಸಿನ ಬಗ್ಗೆ ಮಾತ್ರ ತಿಳಿಯುತ್ತೇವೆ.

ಈ ಸಾಲುಗಳನ್ನು ಚಪ್ಪಾಳೆ ತಟ್ಟಿಕೊಂಡು ಗಟ್ಟಿಯಾಗಿ ಓದಿ:

ನಡೆ ಮುಂದೆ ನಡೆ ಮುಂದೆ ನುಗ್ಗಿ ನಡೆ ಮುಂದೆ

ಜಗ್ಗದೆಯೆ ಕುಗ್ಗದೆಯೆ ಹಿಗ್ಗಿ ನಡೆ ಮುಂದೆ

ಕೋಟು ಗೀಟು ತೊಟ್ಟುಕೊಂಡು

ಹೇಟು ಬೂಟು ಹಾಕಿಕೊಂಡು

ಬೂಟಿನಿಂದ ಹೊರಟ ತಮ್ಮ

ಡಬ್ ಡಬ್ ಡಬ್

ಇದನ್ನು ಹೇಳುವಾಗ ಕಿವಿಗೆ ಒಂದು ಕುಣಿತದ ಸ್ಥಿತಿ ಸಿಗುತ್ತದೆ ಅಲ್ಲವೇ? ಇದೇ ಲಯ. ಇದು ಹೇಗೆ ಬಂತು? ಕೆಲವು ಅಕ್ಷರಗಳು ಚಿಕ್ಕವು, ಕೆಲವು ದೊಡ್ಡವು, ಕೆಲವಕ್ಕೆ ಒತ್ತಕ್ಷರವಿದೆ. ಈ ಅಕ್ಷರಗಳನ್ನು ಓದುವಾಗ ಅವು ತೆಗೆದುಕೊಳ್ಳುವ ಸಮಯದಲ್ಲಿ ವ್ಯತ್ಯಾಸವಿದೆ.

ನಡೆ ಎಂಬ ಪದ ತೆಗೆದುಕೊಳ್ಳುವ ಸಮಯಕ್ಕೂ ಮುಂದೆ ಎಂಬ ಪದ ತೆಗೆದುಕೊಳ್ಳುವ ಸಮಯಕ್ಕೂ ವ್ಯತ್ಯಾಸವಿದೆ, ನುಗ್ಗಿ, ಹಿಗ್ಗಿ ಎಂಬ ಪದ ತೆಗೆದುಕೊಳ್ಳುವ ಸಮಯಕ್ಕೂ ಕೋಟು, ಗೀಟು, ಬೂಟು ಎಂಬ ಪದ ತೆಗೆದುಕೊಳ್ಳುವ ಸಮಯಕ್ಕೂ ವ್ಯತ್ಯಾಸವಿದೆ. ಹೀಗೆ ನಿರ್ದಿಷ್ಟ ಸಮಯ ತೆಗೆದುಕೊಳ್ಳುವ ಪದಗಳನ್ನು ಒಂದು ಕ್ರಮದಲ್ಲಿ ಜೋಡಿಸಲಾಗಿದೆ. ಈ ಜೋಡಣೆ ನೀಡುವ ವ್ಯವಸ್ಥೆಯೇ ಲಯ.

ಈಗ ಕೆಳಗೆ ನೀಡಿರುವ ಅಕ್ಷರಗಳನ್ನು ನಿಲ್ಲಿಸದೇ ಜೋರಾಗಿ ಹೇಳಿ ನೋಡಿ:

ಅ ಇ ಉ ಋ ಎ ಒ

ಕ ಲಿ ಕು ರು ಗೆ ಮೊ

ಇವುಗಳನ್ನು ಹೇಳಲು ಒಂದು ಚಿಟಿಕೆಯಷ್ಟು ಕಾಲ ಸಾಕಾಗುತ್ತದೆ. ಛಂದಸ್ಸಿನ ಭಾಷೆಯಲ್ಲಿ ಇದನ್ನು "ಲಘು" ಎಂದು ಹೇಳಲಾಗುತ್ತಿದೆ. ಲಘುವನ್ನು ಗುರುತಿಸಲು 'U' ಎಂಬ ಚಿಹ್ನೆ ಬಳಸಲಾಗುತ್ತದೆ. ಈ ಚಿಹ್ನೆಯನ್ನು ಬಳಸಿ ಅಕ್ಷರಗಳನ್ನು ಬರೆಯುವ ರೀತಿಯನ್ನು ಗಮನಿಸಿ:

| | | | | | |
|---|---|---|---|---|---|
| U<br>ಅ | U<br>ಇ | U<br>ಉ | U<br>ಋ | U<br>ಎ | U<br>ಒ |
| U<br>ಕ | U<br>ಲಿ | U<br>ಕು | U<br>ರು | U<br>ಗೆ | U<br>ಮೊ |

ಈಗ ಕೆಳಗೆ ನೀಡಿರುವ ಅಕ್ಷರಗಳನ್ನು ನಿಲ್ಲಿಸದೇ ಜೋರಾಗಿ ಹೇಳಿ ನೋಡಿ:

ಆ ಈ ಊ ಏ ಓ

ನಾ ಯೀ ಗೂ ಗೇ ಲೋ

ಇವುಗಳನ್ನು ಹೇಳಲು ಹಿಂದಿನ ಎರಡರಷ್ಟು ಕಾಲ (ಎರಡು ಚಿಟಿಕೆಯಷ್ಟು ಕಾಲ) ಬೇಕಾಗುತ್ತದೆ. ಛಂದಸ್ಸಿನ ಭಾಷೆಯಲ್ಲಿ ಇದನ್ನು 'ಗುರು' ಎಂದು ಹೇಳಲಾಗುತ್ತಿದೆ. ಗುರುವನ್ನು ಗುರುತಿಸಲು '-' ಎಂಬ ಚಿಹ್ನೆ ಬಳಸಲಾಗುತ್ತದೆ. ಈ ಚಿಹ್ನೆಯನ್ನು ಬಳಸಿ ಅಕ್ಷರಗಳನ್ನು ಬರೆಯುವ ರೀತಿಯನ್ನು ಗಮನಿಸಿ:

| | | | | |
|---|---|---|---|---|
| -<br>ಆ | -<br>ಈ | -<br>ಊ | -<br>ಏ | -<br>ಓ |
| -<br>ನಾ | -<br>ಯೀ | -<br>ಗೂ | -<br>ಗೇ | -<br>ಲೋ |

ಮುಂದೆ ನೀಡಿರುವ ಅಕ್ಷರಗಳನ್ನು ಪ್ರತಿ ಪದಕ್ಕೂ ಒಂದು ಕ್ಷಣ ನಿಲುಗಡೆ ನೀಡಿ ಜೋರಾಗಿ

ಹೇಳಿ ಓದಿ:

ಕಗ್ಗ, ಚಿಕ್ಕ, ಅಜ್ಜ, ಅಮ್ಮ, ಅಯ್ಯ, ಸಣ್ಣ, ದೊಡ್ಡ, ಬಚ್ಚಿ, ಬೆಟ್ಟ, ಕತ್ತೆ, ಬೊಪ್ಪ, ಮುದ್ದ, ಹಬ್ಬ. ನೀವು ಓದುವಾಗ ಇದನ್ನು ಹೀಗೆಯೂ ಓದಿರಬಹುದೆಂಬುದನ್ನು ಗಮನಿಸಿ:

ಕಗ್‌ಗ, ಚಿಕ್‌ಕ, ಅಜ್‌ಜ, ಅಮ್‌ಮ, ಅಯ್‌ಯ, ಸಣ್‌ಣ, ದೊಡ್‌ಡ, ಬಚ್‌ಚಿ, ಬೆಟ್‌ಟ, ಕತ್‌ತೆ, ಬೊಪ್‌ಪ, ಮುದ್‌ದ, ಹಬ್‌ಬ.

ಮೇಲಿನ ಪದಗಳಲ್ಲಿ ಒತ್ತಕ್ಷರದ ಹಿಂದಿನ ಪದ ಎರಡು ಚಿಟಿಕೆಯಷ್ಟು ಕಾಲ ತೆಗೆದುಕೊಳ್ಳುವುದರಿಂದ ಒತ್ತಕ್ಷರದ ಹಿಂದಿನಕ್ಷರ ಗುರು ಒತ್ತಕ್ಷರ ಲಘು.

ಮೇಲಿನ ಪದಗಳಿಗೆ ಗುರು ಲಘು ಹಾಕೋಣ

| - U | - U | - U | - U | - U | - U | - U | - U | | | |
|---|---|---|---|---|---|---|---|---|---|---|
| ಕಗ್ ಗ | ಚಿಕ್‌ಕ | ಅಜ್‌ಜ | ಅಮ್‌ಮ | ಅಯ್‌ಯ | ಸಣ್‌ಣ | ದೊಡ್‌ಡ | ಬಚ್‌ಚಿ | | | |
| - U | - U | - U | - U | - U | - U | - U | - U | - U | - U | - U |
| ಕಗ್ಗ | ಚಿಕ್ಕ | ಅಜ್ಜ | ಅಮ್ಮ | ಅಯ್ಯ | ಸಣ್ಣ | ದೊಡ್ಡ | ಬಚ್ಚಿ | ಬೆಟ್ಟ | ಕತ್ತೆ | ಬೊಪ್ಪ |

ಅನುಸ್ವಾರ (ಂ) ಬಂದರೆ ಅದರ ಹಿಂದಿನಕ್ಷರ ಗುರುವಾಗುತ್ತದೆ

| - U | - U | - U | - U | - U | - U | - U | - U | - U |
|---|---|---|---|---|---|---|---|---|
| ಕಂದ | ಮಂಗ | ಚಂಪ | ಸಂತೆ | ಕುಂತಿ | ಗೋಂದು | ಗಿಂಡಿ | ಉಂಡೆ | ಅಂಚೆ |

## *ಅಭ್ಯಾಸ*

**ಅ) ಕೆಳಗಿನ ಅಕ್ಷರಗಳಿಗೆ ಗುರು ಲಘು ಹಾಕಿ:**

ಕೋ ಳಿ ಕೂ ಗಿ ತು ಬೆ ಳ ಕು ಹ ರಿ ಯಿ ತು

ಕಾ ಗೆ ಕೋ ತಿ ಮೊ ಲ

**ಆ) ಕೆಳಗಿನ ಪದಗಳಿಗೆ ಗುರು ಲಘು ಹಾಕಿ: ಜನಪ ಮಣಿ ಬೊಪ್ಪ ಆಹವ ಯುದ್ಧ**

ಭೇದನ ಅನುವರ ಕೃತಾಂತ ಅಹಿತರು ಕಾಳಗ

**ಇ) ಕೆಳಗಿನ ಪದಗಳಿಗೆ ಗುರು ಲಘು ಹಾಕಿ:**

ಸಂಜೆ ಬಂಟ ಸಂಘ ಪಂಪ ಸಂಪುಟ ಹುಂಡಿ ಗಂಗೆ ಅಂಬಾ ಇಂಗು

## *ಮಾತ್ರಾಗಣ*

ಲಘು ಮತ್ತು ಗುರು ಇವುಗಳನ್ನು ಮಾತ್ರೆ ಎಂದೂ ಕರೆಯಲಾಗುತ್ತದೆ. ಲಘು (U) ವಿಗೆ ಒಂದು ಮಾತ್ರೆಯ ಬೆಲೆಯಾದರೆ ಗುರುವಿಗೆ (-) ಎರಡು ಮಾತ್ರೆಯಷ್ಟು ಬೆಲೆ.

(U) = ಒಂದು ಮಾತ್ರೆ, (-) = ಎರಡು ಮಾತ್ರೆ, (UU) = ಎರಡು ಮಾತ್ರೆ, (U -) = ಮೂರು ಮಾತ್ರೆ, () = ನಾಲ್ಕು ಮಾತ್ರೆ, (UUUU) = ನಾಲ್ಕು ಮಾತ್ರೆ, (U) = ಐದು ಮಾತ್ರೆ, (U) = ಐದು ಮಾತ್ರೆ, (U)(UUUU) = ಐದು ಮಾತ್ರೆ, ಗಣ ಎಂದರೆ ಗುಂಪು. ಒಂದು, ಎರಡು, ಮೂರು, ನಾಲ್ಕು, ಐದು ಮಾತ್ರೆಗಳ ಗುಂಪಿಗೆ ಮಾತ್ರಾಗಣ ಎಂದು ಕರೆಯಲಾಗುತ್ತದೆ. ಅಕ್ಷರಗಳನ್ನು ಮತ್ತು ಪದಗಳನ್ನು ಮಾತ್ರೆಯಲ್ಲಿ ಬೆಲೆಕಟ್ಟಿ ಅದನ್ನು ಗುಂಪು ಗುಂಪಾಗಿ ಮಾಡಿ ಮಾತ್ರಾಗಣದ ಗುಂಪು ಎಂದು ಕರೆಯಲಾಗುತ್ತದೆ.

ಉದಾಹರಣೆ:

| U<br>ತ | U<br>ಕ | U<br>ತ | U<br>ಕಿ | U<br>ಟ = | ಒಂದು ಮಾತ್ರೆಯ ಗುಂಪು | |
|---|---|---|---|---|---|---|
| UU<br>ತಕ | UU<br>ತಕ | UU<br>ತಕ = | ಎರಡು ಮಾತ್ರೆಯ ಗುಂಪು | | | |
| UUU<br>ತಕಿಟ | UUU<br>ತಕಿಟ | UUU<br>ತಕಿಟ = | ಮೂರು ಮಾತ್ರೆಯ ಗುಂಪು | | | |
| UU<br>ತಕ | UUU<br>ತಕಿಟ | UU<br>ತಕ | UUU<br>ತಕಿಟ | UU<br>ತಕ | UUU<br>ತಕಿಟ = | ಎರಡು ಮತ್ತು ಮೂರು ಮಾತ್ರೆಯ ಗುಂಪು |

| UUU | UUU | UUU | UUUU | UUU | UUU | ಮೂರು ಮತ್ತು ನಾಲ್ಕು ಮಾತ್ರೆಯ ಗುಂಪು |
|---|---|---|---|---|---|---|
| ತಕಿಟ | ತಕತಕ | ತಕಿಟ | ತಕತಕ | ತಕಿಟ | ತಕತಕ = | |

**ಮೂರು ಮಾತ್ರೆಯ ನಾಲ್ಕು ಗುಂಪು ಇರುವ ಪದ್ಯವನ್ನು ನೋಡಿ**

| UUU | -UU | UUU | -U | | | |
|---|---|---|---|---|---|---|
| ರಜೆಯ | ಗೌಜಿ | ಮುಗಿಯಿ | ತಲ್ಲ | | | |
| –U | –UU | UUU | –U | | | |
| ಗುಲ್ಲು | ಸೊಲ್ಲು | ನಿಲಿಸಿ | ಮೆಲ್ಲ | | | |
| – U | –U | –U | –U | –U | –U | – |
| ಮಕ್ಕ | ಳೆಲ್ಲ | ಸಿದ್ಧ | ರಾಗಿ | ಮತ್ತೆ | ಓದಿ | ಗೆ |

**ನಾಲ್ಕು ಮಾತ್ರೆಯ ಎರಡು ಗುಂಪು ಇರುವ ಪದ್ಯವನ್ನು ನೋಡಿ:**

| -UU | UUUUU | |
|---|---|---|
| ಬೇಸಿಗೆ | ರಜೆಯಲಿ | |
| -UU | -UU | |
| ಅಜ್ಜಿಯ | ಊರಿಗೆ | |
| -UU | -UU | - |
| ಹೋಗುವು | ದೆಂಥಮ | ಜಾ |

## ಷಟ್ಪದಿ

‘ಷಟ್’ ಎಂದರೆ ಆರು ‘ಪದಿ’ ಎಂದರೆ ಪಾದದಿಂದ ಕೂಡಿದ್ದು. ಆರು ಪಾದ ಅಥವಾ ಸಾಲುಗಳಿಂದ ಕೂಡಿದ ಪದ್ಯರೂಪ ಷಟ್ಪದಿ. ಆರು ರೀತಿಯ ಷಟ್ಪದಿಗಳಿವೆ. ಅವುಗಳನ್ನು ಶರ,ಕುಸುಮ,ಭೋಗ, ಭಾಮಿನಿ, ಪರಿವರ್ಧಿನಿ ವಾರ್ಧಕ ಎಂದು ಕರೆಯಲಾಗುತ್ತದೆ. ಮಾತ್ರಾಗಣಗಳ ಆಧಾರದ ಮೇಲೆ ಷಟ್ಪದಿಗಳನ್ನು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ.

| -UU | -UU | | |
|---|---|---|---|
| 1. ಬಾಳೆಯ | ತೋಟದ | | |
| -UU | -UU | | |
| 2. ಪಕ್ಕದ | ಕಾಡೊಳು | | |
| -UU | -UU | -UU | - |
| 3. ವಾಸಿಸು | ತಿದ್ದವು | ಮಂಗಗ | ಳು |
| -UU | -UU | | |
| 4. ಮಂಗಗ | ಳೆಲ್ಲವು | | |
| -UU | -UU | | |
| 5. ಒಟ್ಟಗೆ | ಸೇರುತ | | |
| -UU | -UU | -UU | - |
| 6. ಒಂದುಪ | ವಾಸವ | ಮಾಡಿದ | ವು |

ಮೇಲಿನ ಪದ್ಯದಲ್ಲಿ ನಾಲ್ಕು ಮಾತ್ರೆಯ ಎರಡು ಗುಂಪು 1, 2, 4 ಮತ್ತು 5 ನೆಯ ಸಾಲಿನಲ್ಲೂ ನಾಲ್ಕು ಮಾತ್ರೆಯ ಮೂರು ಗುಂಪು 3 ಮತ್ತು 6 ನೆಯ ಸಾಲಿನಲ್ಲೂ ಇವೆ. 3 ಮತ್ತು 6 ನೆಯ ಸಾಲಿನ ಕೊನೆಯಲ್ಲಿ ಒಂದು ಅಕ್ಷರ ಮಾತ್ರ ಇದೆ, ಒಂದೇ ಅಕ್ಷರವಾದರೂ ಅದಕ್ಕೆ ಎರಡು ಮಾತ್ರೆಯ ಕಾಲದ ಉಚ್ಚಾರಣೆಯಿದೆ. ಹಾಗೆ ಅದು ಗುರು, ಪದ್ಯ ಹೀಗಿದ್ದರೆ ಅದು ಶರಷಟ್ಪದಿ. ಇರುವ ಪದ್ಯವನ್ನು ಮುಂದೆ

ನೋಡಿ...

ಈ. ಪದ್ಯಕ್ಕೆ ಮಾತ್ರೆಗಳನ್ನು (ಪ್ರಸ್ತಾರ) ಹಾಕಿ:

1. ಹೂವನು/ ಮಾರುತ
2. ಹೂವಾ ಡಗಿತ್ತಿ
3. ಹಾಡುತ ಬರುತಿಹ ಳು
4. ಘಮಘಮ/ ಹೂಗಳು
5. ಬೇಕೇ/ ಎನ್ನುತ/
6. ಹಾಡುತ/ ಬರುತಿಹ/ ಳು

ಕುಮಾರವ್ಯಾಸ ಬಳಸಿರುವ ಛಂದಸ್ಸು ಭಾಮಿನೀ ಷಟ್ಪದಿ ಇದರ ಸ್ವರೂಪ ನೋಡಿ:

| | | | | | | | |
|---|---|---|---|---|---|---|---|
| UUU<br>ಹಸುಳೆ | UUUU<br>ಯದಟಿನ | UUU<br>ನುಡಿಯ | -UU<br>ಕೇಳಿದು | (3 4 3 4) | | | |
| UUU<br>ನಸುನ | UU-<br>ಗುತಧ | UUU<br>ರ್ಮಜನು | UU-<br>ಘನಪೌ | (3 4 3 4) | | | |
| UUU<br>ರುಷವು | UU-<br>ನಿನಗುಂ | -U-<br>ಟೆಂದು | UUU<br>ಕಂದನ | UUU<br>ತೆಗೆದು | UU-<br>ಬಿಗಿಯ | -<br>ಪ್ಪಿ | (3 4 3 4 3 4 2) |
| UUU<br>ಶಿಶುವು | -UU<br>ನೀನೆಲೆ | UUU<br>ಮಗನೆ | -UU<br>ಕಾದುವ | (3 4 3 4) | | | |
| UUU<br>ರಸಮು | UUUU<br>ಬಲರುಕ | -U<br>ಣಾಮು | -UU<br>ಹಾರಥ | (3 4 3 4) | | | |
| UUU<br>ರೆಸುಗೆ | UU-<br>ಯನು ನೀ | -U<br>ನೆಂತು | -UU<br>ಸೈರಿಸ | -U-<br>ಲಾಪೆ | - -<br>ಹೇಳೆಂ | -<br>ದ | (3 4 3 4 3 4 2) |

ಮೇಲಿನ ಪದ್ಯದಲ್ಲಿ ಮೂರು/ ನಾಲ್ಕು/ ಮೂರು/ ನಾಲ್ಕು/ ಮಾತ್ರೆಯ ಗುಂಪು 1,2,4 ಮತ್ತು 5 ನೆಯ ಸಾಲಿನಲ್ಲೂ ಮೂರು/ ನಾಲ್ಕು/ ಮೂರು/ ನಾಲ್ಕು/ ಮೂರು/ ನಾಲ್ಕು/ ಮಾತ್ರೆಯ ಮೂರು ಗುಂಪು 3 ಮತ್ತು 6 ನೆಯ ಸಾಲಿನಲ್ಲೂ ಇವೆ. 3 ಮತ್ತು 6 ನೆಯ ಸಾಲಿನ ಕೊನೆಯಲ್ಲಿ ಒಂದು ಅಕ್ಷರ ಮಾತ್ರ ಇದೆ, ಒಂದೇ ಅಕ್ಷರವಾದರೂ ಅದಕ್ಕೆ ಎರಡು ಮಾತ್ರೆಯ ಕಾಲದ ಉಚ್ಚಾರಣೆಯಿದೆ. ಹಾಗೆ ಅದು ಗುರು. ಪದ್ಯ ಹೀಗಿದ್ದರೆ ಅದು ಭಾಮಿನೀ ಷಟ್ಪದಿ. ಇರುವ ಪದ್ಯವನ್ನು ನೋಡಿ ಮತ್ತು ಈ ಪದ್ಯಕ್ಕೆ ಮಾತ್ರೆಗಳನ್ನು (ಪ್ರಸ್ತಾರ) ಹಾಕಿ.

ಬಾಲನಿವನೆನ್ನದಿರು ದುಗುಡವ

ತಾಳಲಾಗದು ಬೊಪ್ಪ ನಿಮ್ಮಡಿ

ಯಾಲಿಗಳಿಗೌತಣವನಿಕ್ಕುವೆನೊರಸಿ ರಿಪುಬಲವ

## ಪೂರಕ ಪಾಠಗಳು 1. ಬಸವಣ್ಣನವರ ಜೀವನ ದರ್ಶನ

ಡಾ. ಎಲ್. ಬಸವರಾಜು



ಶರಣ ಪಂಥದಲ್ಲಿ ಪ್ರಮುಖರೆಂದರೆ ಬಸವಣ್ಣನವರು. ಅವರ ಜೀವನವೊಂದು ಅಮರ ಜ್ಯೋತಿ. ಅದರ ದಿವ್ಯಪ್ರಭೆಯಲ್ಲಿ ಹಲವಾರು ಶತಮಾನಗಳ ಕೋಟ್ಯಂತರ ಮುಮುಕ್ಷುಗಳು ಸನ್ಮಾರ್ಗವನ್ನು ಕಂಡುಕೊಂಡು ಕೃತಾರ್ಥರಾಗಿದ್ದಾರೆ. ಕನ್ನಡ-ಸಾಹಿತ್ಯ ಕ್ಷೇತ್ರದಲ್ಲಂತೂ ಆ ಜೀವಜ್ಯೋತಿಯ ಪ್ರಭಾವ

ಅಷ್ಟಿಷ್ಟಲ್ಲ.

ಬಾಗೇವಾಡಿಯ ಮಾದಿರಾಜನೆಂಬ ಸದ್ವಿಪ್ರನ ಧರ್ಮಪತ್ನಿ ಮಾದಾಂಬೆಯ ಗರ್ಭದಲ್ಲಿ ಬಸವಣ್ಣನವರು ಚಿಪ್ಪಿನಲ್ಲಿ ಮುತ್ತೂ, ಕೊಳದಲ್ಲಿ ಕಮಲವೂ, ಕೇದಿಗೆಯಲ್ಲಿ ಪರಿಮಳವೂ ಹುಟ್ಟುವಂತೆ ಶಿವನ ಶಿಶುವಾಗಿ ಜನಿಸಿದರು. ಆ ಬಸವಶಿಶು ಸುಮುಹೂರ್ತವೇ ಗಂಡುರೂಪಾದಂತೆ ಇತ್ತು. ಆ ಮಗು ಹೆತ್ತವರಿಗೆ ಮುದ್ದಾಗಿ, ಎತ್ತಿಕೊಂಡವರಿಗೆ ಸುಖದ ಸಂಪತ್ತಾಗಿ ಬೆಳೆಯಿತು. ಏಳೆಂಟರ ವಯಸ್ಸಿನಲ್ಲಿ ಉಪನಯನವಾಯಿತು. ಉಪನಯನವಾದ ಎರಡು ವರ್ಷಗಳಲ್ಲಿ ಬಸವಣ್ಣನವರ ತಂದೆತಾಯಿಗಳಿಬ್ಬರೂ ಸತ್ತು ಹೋದರು. ತಬ್ಬಲಿಯಾದ ಬಸವಣ್ಣನವರು ಆರು ವರ್ಷಗಳ ಕಾಲ ತಮ್ಮ ಮುತ್ತಜ್ಜಿಯ ರಕ್ಷಣೆಯಲ್ಲಿದ್ದರು. ಅವರು ಹದಿನಾರು ವರ್ಷದ ಹರೆಯದಲ್ಲಿ ತಮ್ಮ ಯೌವನವು ಶಿವಪೂಜೆಯಲ್ಲಿ ಸವೆಯಬೇಕೆಂದೂ, ಆದರೆ ಶಿವಭಕ್ತಿಯೂ ಕರ್ಮವೂ ಎಂದೂ ಒಂದಾಗಿರದೆಂದೂ ನಿಶ್ಚಯಿಸಿ, ಪರಮ ವೈರಾಗ್ಯಮೂರ್ತಿಯಾಗಿ, ಕರ್ಮಲತೆಯಂತಿದ್ದ ಜನಿವಾರವನ್ನು ಕಳೆದು ಬಿಸುಟು, ಹೋತಿನ ಗಂಟಲನ್ನು ಬಿಗಿಯುವಂತಿದ್ದ ಮೌಂಜಿಯನ್ನು ಹರಿದು ಬಿಸುಟು, ನವ್ಯದುಕೂಲವನ್ನು ತೆಗೆದುಟ್ಟು, ದಿವ್ಯವಸ್ತ್ರವನ್ನು ಹೊದ್ದು, ಮನೆಯ ನೆಳಲನ್ನು ನೆನೆಯದೆ, ಐಶ್ವರ್ಯವನ್ನು ಲೆಕ್ಕಿಸದೆ, ವೃತ್ತಿಯನ್ನು ವಿಚಾರಿಸದೆ,

ಬಂಧುಬಳಗವನ್ನು ಬಗೆಯದೆ, ಊರಿನವರನ್ನೂ ನೋಡದೆ ಬಾಗೇವಾಡಿಯನ್ನು ಬಿಟ್ಟು ಹೊರಟರು. ಪೂರ್ವದಿಕ್ಕಿಗೆ ನಡೆದು, ಸ್ವಲ್ಪ ದೂರದಲ್ಲೇ ಇದ್ದ ಮಲಪ್ರಹರಿ-ಕೃಷ್ಣವೇಣೀ ನದಿಗಳ ಸಂಗಮ ಸ್ಥಾನದಲ್ಲಿ ಕೂಡಲ ಸಂಗಮೇಶ್ವರನಿರುವ ಕಪ್ಪಡಿಯ ಸಂಗಮವನ್ನು ತಲುಪುವರು.

ಅಣ್ಣನವರು ಚಿಂತನ ಮಾಡುತ್ತ ಕುಳಿತಿರಲು ಕೂಡಲಸಂಗಮದ ಸ್ಥಾನಪತಿಗಳಾದ ಈಶಾನಗುರುಗಳು ಬಂದು ಆ ಬಸವಣ್ಣನವರ ಯೋಗ- ನಿದ್ರಾಮುದ್ರಿತ ಅರ್ಧನಿಮೀಲಿತ ನಯನಗಳನು ಕಂಡು, ಕಾರಣಿಕನಿರಬೇಕೆಂದು ನಿಶ್ಚಯಿಸಿ, ಬಳಿಸಾರಿ "ಅಯ್ಯ, ನೀನೆಲ್ಲಿಗೂ ಹೋಗಬೇಡ, ಏನನ್ನೂ ಚಿಂತಿಸಬೇಡ, ಸಂಗಮೇಶ್ವರನಿಗೆ ಹೊಸ ಹೂವುಗಳನ್ನೂ ತಿಳಿಯಗ್ಗವಣಿಯನ್ನೂ ತಂದು ನಿತ್ಯವೂ ಪೂಜೆಮಾಡಿ ಪ್ರಸಾದ ಕಾಯಕನಾಗಿ ಸುಖವಾಗಿರು" ಎನ್ನುವರು. ಆ ಮಾತಿಗೆ ಬಸವಣ್ಣನವರು ಒಪ್ಪಿ ಶ್ರೀ ಕೂಡಲ ಸಂಗಮೇಶ್ವರ ಪಾದಕಮಲದಲ್ಲಿ ತುಂಬಿಯಾಗಿದ್ದರು.

ಕಪ್ಪಡಿ ಸಂಗಮದಲ್ಲಿಯೇ ಸಂಗಮೇಶ್ವರನ ಪಾದಸೇವೆ ಮಾಡಿಕೊಂಡಿರುವ ಆಶೆ ಬಸವಣ್ಣನವರಿಗೆ. ಆದರೆ ಇರಗೊಡ ಸಂಗಮೇಶ್ವರ. ಮಂಗಳವಾಡಕ್ಕೆ ಹೋಗೆಂದು ಮತ್ತೆ ಮತ್ತೆ ಒತ್ತಾಯ ಮಾಡಿದಂತೆ ಭಾಸವಾಯಿತು. ಬಸವಣ್ಣನವರು ಹೋಗಲಾರದೆ ವಿರಹವೇದನೆಯಿಂದ ನೊಂದು, "ಆಗಲಿ ಸಂಗನು ನನಗಂತೂ ಪೂಜಿಸಿಕೊಂಡಿರಲು ಅವಕಾಶ ಕೊಡುತ್ತಿಲ್ಲ. ಮಂಗಳವಾಡಕ್ಕೆ ಹೋಗೆಂದು ಸದಾ ನನ್ನನು ಪೀಡಿಸುತ್ತಿರುವನು, ಅವನ ಮಾತಿನ ಪ್ರಕಾರ ಹೋಗಿ ನೋಡುತ್ತೇನೆ. ಹೇಗಿದ್ದರೂ ಅಪರಿಚಿತ ದೇಶವೆಂದು ಹೆದರಬೇಕಾಗಿಲ್ಲ, ಅಕ್ಷರಜ್ಞಾನವಿದೆ. ಅದನ್ನೇ ಮಾರಿ, ಬಂದ ಹಣದಿಂದ ಶಿವಭಕ್ತರಿಗೆ ಸೇವೆ ಸಲ್ಲಿಸುವೆನು, ಪ್ರಸಾದವನ್ನು ಪಡೆಯುವೆನು ಎಂದು ನಿರ್ಧರಿಸಿದರು.

ಬಸವಣ್ಣನವರಿಗೆ ಸಂಗನ ಕರುಣವೇ ಬೆಂಬಲವಾಯ್ತು, ಸಂಗನ ಧ್ಯಾನವೇ ಸಂಗಡವಾಯ್ತು. ಸಂಗನಾಡಿದ ಮಾತುಗಳನ್ನೇ ಮತ್ತೆ ಮತ್ತೆ ಮನದೊಳಗೆ ನೆನೆಯುತ್ತ, ನಡೆದ ಆಯಾಸವನ್ನು ಮರೆತು, ಮಂಗಳವಾಡವನ್ನು ತಲುಪಿ, ಬಿಜ್ಜಳನ ಅರಮನೆಯ ಕಡೆ ನಡೆದು, ಕರಣಶಾಲೆಗೆ ಬಂದು ಕುಳಿತಿದ್ದರು. ಆ ಸಮಯಕ್ಕೆ ಸರಿಯಾಗಿ ತನ್ನ ಮೇಲೆ ಉಳಿದಿರುವ ರಾಜಧನದ ವಿವರವನ್ನು ಕೇಳಲು ಅಲ್ಲಿಗೆ ಬಂದ ಭಂಡಾರಿ ಸಿದ್ಧದಂಡಾಧಿಪನು ಕರಣಿಕರ ತಪ್ಪು ಲೆಕ್ಕದಿಂದ ಮೋಸ ಹೋಗುತ್ತಿದುದ್ದನ್ನು ಬಸವಣ್ಣನವರು ಗಮನಿಸಿ, ಮಧ್ಯೆ ಪ್ರವೇಶಿಸಿ, ಸರಿಯಾದ ಲೆಕ್ಕವನ್ನು ತೋರಿಸಿ, ಆಗುತ್ತಿದ್ದ ಅಪಾರ ನಷ್ಟದಿಂದಲೂ, ಸಂಭವಿಸುತ್ತಿದ್ದ ರಾಜಾಗ್ರಹದಿಂದಲೂ ಸಿದ್ಧದಂಡಾಧಿಪನನ್ನು ಪಾರುಮಾಡುವರು ಗಣಿತ ಶಾಸ್ತ್ರದಲ್ಲಿ ಅಸದೃಶ ನೈಪುಣ್ಯವನ್ನು ಪ್ರದರ್ಶಿಸಿದ ಯುವಕನಾದ ಬಸವಣ್ಣನವರ ಮೇಲೆ ಸಿದ್ಧದಂಡಾಧಿಪನಿಗೆ ಮಮತೆ ಬಂದು, ಅವರನ್ನು ಕರೆತಂದು, ರಾಜನಿಗೆ ಕಾಣಿಸಿ, ಭಂಡಾರಕ್ಕೆ ಮರಿಭಂಡಾರಿಯನ್ನಾಗಿ ನೇಮಿಸಿಕೊಳ್ಳುವನು. ವರ್ಷಕ್ಕೆ ನೂರೊಂದು ಹೊನ್ನು ನಿಗದಿಯಾಯಿತು.

ಕಾಲ ಗತಿಸಿತು. ಸಿದ್ಧದಂಡನಾಯಕನು ಕಾಯಿಲೆ ಬಿದ್ದು ಕೈಲಾಸವಾಸಿಯಾದನು. ಬಸವಣ್ಣನವರು ಸಿದ್ಧದಂಡನಾಯಕನ ಅಂತ್ಯ ಸಂಸ್ಕಾರವನ್ನು ನೆರವೇರಿಸಿ, ನಿರ್ವೇಗದಿಂದ

ಬಂದು ಬಿಜ್ಜಳನನ್ನು ಕಂಡು, "ಸಿದ್ಧದಂಡಾಧಿಪನು ಗಂಡು ಮಕ್ಕಳಿಲ್ಲದೆ ಕಾಲಾಧೀನನಾದ. ನನಗೀಗ ಏನೂ ತೋಚದಾಗಿದೆ. ಬುದ್ಧಿಗೊಡಬೇಕು" ಎಂದು ಕೇಳಿಕೊಂಡನು. ಆಗ ಬಿಜ್ಜಳನು- "ಆತನ ಆಳು ಕುದುರೆ ಸಮಸ್ತ ವಿತ್ತವೂ ನಿನ್ನದೇ. ನಿನ್ನ ಬರುವಿಕೆಯಿಂದ ನನ್ನ ಭಂಡಾರವೂ ಹೆಚ್ಚಿತು. ಇನ್ನು ಮೇಲೆ ನನ್ನ ದೇಶಕ್ಕೂ ಕೋಶಕ್ಕೂ ನೀನೇ ಅಧಿಕಾರಿ" ಎಂದು ಬಸವಣ್ಣನವರಿಗೆ ಒಂದು ಪಟ್ಟಾವಳಿಯನ್ನು ಉಡುಗೊರೆಯಾಗಿ ಕೊಟ್ಟು, ಇನ್ನೊಂದನ್ನು ಬಾಳೆಂದು ಹರಸಿ ಕೊಟ್ಟನು. ಅವರನ್ನು ಕಟಕಮಕುಟಗಳಿಂದ ಸಿಂಗರಿಸಿ, ಪಟ್ಟದಾನೆಯ ಮೇಲೆ ಕುಳ್ಳಿರಿಸಿ. ಶ್ವೇತಚ್ಛತ್ರವನ್ನು ಹಿಡಿಸಿ, ಪುರದ ಕೇರಿಗಳೊಳಗೆ ಮೆರೆಸಿದನು. ಅಂದಿನಿಂದ ಬಸವಣ್ಣನವರು "ಬಸವದಂಡನಾಥ", "ಭಂಡಾರಿ ಬಸವ" ಎನಿಸಿದರು.

ಬಸವಣ್ಣನವರ ವಚನಗಳಲ್ಲಿನ ಭಾವತೀವ್ರತೆ, ಏಕಾಗ್ರತೆ ಮತ್ತು ಆತ್ಮೀಯತೆ ಪ್ರಶಂಸನೀಯವೂ, ಆದುದರಿಂದ, ಪ್ರಸಿದ್ಧವೂ ಆಗಿದೆ! ಈ ಅನರ್ಘಗುಣಗಳ ಶತಾಂಶವು ಸಿದ್ಧರಾಮ, ಅಕ್ಕಮಹಾದೇವಿ ಮುಂತಾದ ಕೆಲವರ ವಚನಗಳಲ್ಲಿರುವುದರಿಂದಲೇ, ಅವು ಉತ್ತಮ ಭಾವಗೀತೆಗಳೆನಿಸಿಕೊಂಡಿವೆ. ಅಂಬಿಗರ ಚೌಡಯ್ಯನ ವಚನಗಳಲ್ಲಿ ವಿಡಂಬನೆಯಿರಬಹುದು, ನಗೆಯ ಮಾರಿ ತಂದೆಯ ವಚನಗಳಲ್ಲಿ ಹೊಗೆಯಾಡುವ ನಗೆಯಿರಬಹುದು, ಪ್ರಭುದೇವರ ವಚನಗಳಲ್ಲಿ ದರ್ಶನವಿಶುದ್ಧಿಯಿರಬಹುದು, ಚೆನ್ನಬಸವಣ್ಣನವರ ವಚನಗಳಲ್ಲಿ ವಿಚಾರಧಾರೆಯಿರಬಹುದು, ಅಕ್ಕನ ವಚನಗಳಲ್ಲಿ ಮಧುರಭಾವವಿರಬಹುದು, ಮಿಕ್ಕ ವಚನಕಾರರಲ್ಲಿ ಅವರವರ ಅನುಭವಾನುಗುಣ ಭಾವಾಭಿವ್ಯಕ್ತಿಯಿರಬಹುದು. ಆದರೆ ಬಸವಣ್ಣನವರೊಬ್ಬರ ವಚನಗಳಲ್ಲೇ ಈ ಎಲ್ಲವೂ ಇದ್ದು, ಮೇಲೆ ಭಕ್ತಿರಸಕ್ಕೆ ಪೋಷಕವಾಗಿ -ಶಕ್ತಿದಾಯವಾಗಿ ಮಿಕ್ಕೆಲ್ಲ ರಸಗಳ ಲೀಲೆಯೂ ನಡೆದಿರುವುದು.

ಸಾಮಾಜಿಕ ಮತ್ತು ಮತೀಯ ಸಂಕುಚಿತ ಗಣನೆಯ ದುಷ್ಪರಿಣಾಮವಾಗಿ ಮಾನವಕುಲದಲ್ಲಿ ತಲೆದೋರುವ ಮೇಲು-ಕೀಳೆಂಬ ವಿಂಗಡಣೆಯನ್ನು ಬಸವಣ್ಣನವರು ಮಾನ್ಯ ಮಾಡಲಿಲ್ಲ. ಪ್ರಾಂತ-ಪ್ರದೇಶವಾಗಲಿ, ವಿದ್ಯೆ-ಪದವಿಯಾಗಲಿ. ಧನ-ಧಾನ್ಯವಾಗಲಿ, ಕೊನೆಗೆ ಪ್ರಕೃತಿಸಿದ್ಧವಾದ ಹೆಣ್ಣು-ಗಂಡೆಂಬ ಭೇದವಾಗಲಿ ಮಾನವರನ್ನು ವಿಭಜಿಸಿ, ಭಿನ್ನ-ಭಿನ್ನಗೊಳಿಸಿ, ಪ್ರತ್ಯೇಕಿಸುವುದನ್ನು ಅವರು ಸಹಿಸಲಿಲ್ಲ. ಅದಕ್ಕೆ ಬದಲಾಗಿ ಜನರಲ್ಲಿ ಒಗ್ಗಟ್ಟನ್ನೂ ಒಡನಾಟವನ್ನೂ- ಇವನ್ನು ಅಭಿವೃದ್ಧಿಗೊಳಿಸುವಂತಹ ಧರ್ಮವನ್ನು ಬೋಧಿಸಿದರು. ಈ ಕಾರಣದಿಂದಲೇ, ಬಸವಣ್ಣನವರು ಬೋಧಿಸಿದ ಧರ್ಮದ ಜೀವಾಳ ದಾನ-ದಯೆ-ನಿರಾಡಂಬರ-ವಿನಯ-ಭಕ್ತಿ-ದುಡಿಮೆ, ನಿಷ್ಕಾಮಕರ್ಮ ಮತ್ತು ಸರಳಜೀವನ. ಒಟ್ಟಿನಲ್ಲಿ ಮನುಕುಲವೆಲ್ಲ ಒಂದೆಂಬ ಭಾವದಿಂದ ಪರಸ್ಪರ ಹಿತ-ಅಭಿವೃದ್ಧಿಗಾಗಿ

ಬಾಳಬೇಕೆಂಬುದೇ ಅವರ ದರ್ಶನಸಾರ.

## ಕೃತಿಕಾರರ ಪರಿಚಯ



ಡಾ. ಎಲ್. ಬಸವರಾಜು ರವರು ಕ್ರಿಸ್ತ ಶಕ 1919 ರಲ್ಲಿ ಕೋಲಾರ ಜಿಲ್ಲೆಯ ಎಡಗೂರು ಗ್ರಾಮದಲ್ಲಿ ಜನಿಸಿದರು. ಇವರು ವೃತ್ತಿಯಿಂದ ಪ್ರಾಧ್ಯಾಪಕರು. ಶಿವದಾಸ ಗೀತಾಂಜಲಿ, ಬಸವಣ್ಣನವರ ವಚನಗಳು, ಭಾಸನ ಭಾರತ ರೂಪಕ, ಅಲ್ಲಮನ ವಚನಗಳು ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಶ್ರೀಯುತರಿಗೆ ಪಂಪ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ, ಬಸವ ಪುರಸ್ಕಾರ, ರಾಜ್ಯೋತ್ಸವ ಪುರಸ್ಕಾರಗಳನ್ನು ನೀಡಿ ಗೌರವಿಸಲಾಗಿದೆ. ಪ್ರಸ್ತುತ ಪಾಠವನ್ನು ಡಾ. ಎಲ್. ಬಸವರಾಜು ಅವರು ಸಂಪಾದಿಸಿದ 'ಬಸವಣ್ಣನವರ ವಚನಗಳು' ಕೃತಿಯ ಪೀಠಿಕೆಯಿಂದ ಆಯ್ದುಭಾಗವಾಗಿದೆ.

## ಅಭ್ಯಾಸ

**ಈ ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಬಸವಣ್ಣನವರ ತಂದೆ, ತಾಯಿಯವರ ಹೆಸರೇನು?
2. ಬಸವಣ್ಣನವರು ಬಾಗೇವಾಡಿಯನ್ನು ಬಿಟ್ಟು ಎಲ್ಲಿಗೆ ಹೋದರು?
3. ಈಶಾನ ಗುರುಗಳು ಬಸವಣ್ಣನವರಿಗೆ ಏನು ಹೇಳಿದರು?
4. ಬಸವಣ್ಣನವರ ವಚನಗಳು ಏಕೆ ಪ್ರಸಿದ್ಧವಾಗಿವೆ?
5. ಬಸವಣ್ಣನವರು ಬೋಧಿಸಿದ ಧರ್ಮದ ಜೀವಾಳ ಯಾವುದು?

## 2. ಈ ಭೂಮಿ ಬಣ್ಣದ ಬುಗರಿ

ಹಂಸಲೇಖ



ಈ ಭೂಮಿ ಬಣ್ಣದ ಬುಗರಿ
ಆ ಶಿವನೆ ಚಾಟಿ ಕಣೋ,

ಈ ಬಾಳು ಸುಂದರ ನಗರಿ
ನೀನಿದರ ಮೇಟಿ ಕಣೋ
ನಿಂತಾಗ ಬುಗರಿಯ ಆಟ
ಎಲ್ಲಾರು ಒಂದೇ ಓಟ
ಕಾಲಾ ಕ್ಷಣಿಕ ಕಣೋ
ಈ ಭೂಮಿ ಬಣ್ಣದ ಬುಗರಿ
ಆ ಶಿವನೆ ಚಾಟಿ ಕಣೋ

ಮರಿಬೇಡ ತಾಯಿಯ ಋಣವ
ಮರಿಬೇಡ ತಂದೆಯ ಒಲವ
ಹಡೆದವರೇ ದೈವ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿ ಕಣೋ

ಸುಖವಾದ ಭಾಷೆಯ ಕಲಿಸೋ
ಸರಿಯಾದ ದಾರಿಗೆ ನಡೆಸೋ
ಸಂಸ್ಕೃತಿಯೇ ಗುರುವು ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿ ಕಣೋ

ಮರೆತಾಗ ಜೀವನ ಪಾಠ
ಕೊಡುತಾರೆ ಚಾಟಿಯ ಏಟ
ಕಾಲ ಕ್ಷಣಿಕ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿ ಕಣೋ

ಮರಿಬೇಡ ಮಗುವಿನ ನಗುವ
ಕಳಿಬೇಡ ನಗುವಿನ ಸುಖವ
ಭರವಸೆಯೇ ಮಗುವು ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿ ಕಣೋ

ಕಳಬೇಡ ಕೊಲ್ಲಲು ಬೇಡ
ನೀ ಹಾಡು ಶಾಂತಿಯ ಹಾಡ
ಜೀವನವೇ ಪ್ರೀತಿ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿ ಕಣೋ

ನಿಂತಾಗ ಬುಗರಿಯ ಆಟ
ಎಲ್ಲಾರು ಒಂದೇ ಓಟ
ಕಾಲ ಕ್ಷಣಿಕ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿ ಕಣೋ,

## ಕೃತಿಕಾರರ ಪರಿಚಯ



ಹಂಸಲೇಖರವರು 1951 ರಲ್ಲಿ ಜನಿಸಿದರು. ಇವರ ಮೂಲ ಹೆಸರು ಜಿ. ಗಂಗರಾಜು. ಹಿಂದೂಸ್ಥಾನಿ ಮತ್ತು ಪಾಶ್ಚಾತ್ಯ ಸಂಗೀತ ಶೈಲಿಗಳನ್ನು ಅವರು ವಿವಿಧ ಗುರುಗಳಿಂದ ಕಲಿತರು. ತಮ್ಮ ಸ್ವಂತ ಸಾಧನೆಯಿಂದ ಬೆಳಸಿಕೊಂಡರು. ಹಂಸಲೇಖ ರಚನೆಯ “ಹುಟ್ಟಿದರೇ ಕನ್ನಡ ನಾಡಲ್ಲಿ ಹುಟ್ಟಬೇಕು.” ಗೀತೆಯು ಅಪಾರ ಜನಪ್ರಿಯತೆ ಪಡೆಯಿತು. ಚಿತ್ರರಂಗದೊಂದಿಗೆ 30 ವರ್ಷಗಳ ನಂಟು

ಅವರದು. ಈ ಅವಧಿಯಲ್ಲಿ ಹಂಸಲೇಖ 300 ಕ್ಕೂ ಹೆಚ್ಚು ಚಿತ್ರಗಳಿಗೆ ಗೀತೆ ಬರೆದಿದ್ದಾರೆ. ಸಂಗೀತ ನಿರ್ದೇಶಕರಾಗಿದ್ದಾರೆ.

## ಅಭ್ಯಾಸ

### ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.

1. ಬಣ್ಣದ ಬುಗರಿ ಯಾವುದು?
2. ಯಾರ ಋಣವನ್ನು ಮರೆಯಬಾರದು?
3. ನಮ್ಮ ದೈವ ಯಾರು?
4. ಯಾವುದು ಕ್ಷಣಿಕವಾದುದು?
5. ಎಂತಹ ನಗುವನ್ನು ಮರೆಯಬಾರದು?

## 3. ಸಾವಿತ್ರಿಬಾಯಿ ಫುಲೆ

ಡಾ. ಎಚ್. ಎಸ್. ಅನುಪಮ

ಈಗ್ಗೆ ಒಂದೂವರೆ ಶತಮಾನದ ಹಿಂದೆ...

ಅದಿನ್ನೂ ಸ್ವಾತಂತ್ರ್ಯ ಚಳುವಳಿ ರೂಪುಗೊಳ್ಳದಿದ್ದ ಕಾಲ. ಗಾಂಧಿ ಅಂಬೇಡ್ಕರರಂಥ ದೂರದೃಷ್ಟಿಯ ಜನನಾಯಕರು ಹುಟ್ಟದಿದ್ದ ಕಾಲ. ಆಳುವವರ ನಿರಂತರ ಬದಲಾವಣೆಯಿಂದ ಕ್ಷೋಭೆಗೊಂಡ ಸಮಾಜ ಸ್ವವಿಮರ್ಶೆಯನ್ನು ಮರೆತಂಥ ಕಾಲ. ಬಂಗಾಲ ಮತ್ತು ಉತ್ತರ ಭಾರತದ ಕೆಲ ಸಮಾಜ ಸುಧಾರಕರು ಇಂಗ್ಲಿಷ್ ಶಿಕ್ಷಣ ಪಡೆದು ಆಗಷ್ಟೇ ಭಾರತದ ಸಾಮಾಜಿಕ ಅನಿಷ್ಟಗಳ ಬಗೆಗೆ ಮಾತನಾಡತೊಡಗಿದ್ದರು. ಬಾಲ್ಯ ವಿವಾಹ ಹಾಗೂ ಸತಿ ಪದ್ಧತಿಯ ರದ್ಧತಿ ಕುರಿತು ಕೇಳಿ ಬರತೊಡಗಿದ್ದವು. ಅಕ್ಷರ ಕಲಿಯಲು ತಾವು ಮಾತ್ರ ಅರ್ಹ ಎಂದುಕೊಂಡ ಜಾತಿಗಳ ಹೊರತು ಮತ್ತಾರಿಗೂ ಕಲಿಕೆಗೆ ಅವಕಾಶವಿರಲಿಲ್ಲ. ಆ ಕಾಲದ ಮಹಿಳೆಯರ ಶಿಕ್ಷಣ ಕುರಿತು ಹೇಳುವಂತೆಯೇ ಇಲ್ಲ. “ಹೆಣ್ಣು ಅಕ್ಷರ ಕಲಿತರೆ ಎಲ್ಲರಿಗೂ ಪತ್ರ ಬರೆಯತೊಡಗುತ್ತಾಳೆ. ಆಗ ಅವಳ ಗಂಡ ತಿನ್ನುವ ಅನ್ನದ ಅಗುಳು ಹುಳವಾಗಿ ಅವನು ಕಾಯಿಲೆ ಹಿಡಿದು ಬೇಗ ತೀರಿಕೊಳ್ಳುತ್ತಾನೆ” ಎಂದು ಹೇಳಲಾಗುತ್ತಿತ್ತು. ಹೆಣ್ಣು ಮಗು ತನ್ನ ಬಾಲ್ಯದ ಮುಗ್ಧತೆಯಲ್ಲಿ ಈ ಜಗತ್ತಿಗೆ ಕಣ್ಣಿಡುವ ಹೊತ್ತಿಗೆ ಅವಳ ಮದುವೆಯಾಗಿ, ಯಾರದೋ ಹೆಂಡತಿಯಾಗಿ, ಸೊಸೆಯಾಗಿ ಕೊನೆಗೆ ಅಮ್ಮನಾಗಿ ಬಿಟ್ಟಿರುತ್ತಿದ್ದಳು. ಕುಟುಂಬ ನಿರ್ವಹಣೆಗಾಗಿ, ಕುಟುಂಬ ನಿರ್ವಹಣೆಯಿಂದಲೇ ಅವಳ ವ್ಯಕ್ತಿತ್ವ ರೂಪುಗೊಂಡು ಅಲ್ಲೇ ಕಳೆದುಹೋಗುತ್ತಿತ್ತು. ಹೆಣ್ಣು ಮಕ್ಕಳು ಯಾವತ್ತೂ ಪ್ರಶ್ನಿಸಬಾರದಂತೆ ಹೊರುವ, ಹೆರುವ, ಪೊರೆಯುವ ಕೊನೆಮೊದಲಿಲ್ಲದ ಕೆಲಸಗಳಲ್ಲಿ ಅವರನ್ನು ತೊಡಗಿಸಲಾಗುತ್ತಿತ್ತು. ಒಟ್ಟಾರೆ ಹೇಳುವುದಾದರೆ ದಲಿತ-ಶೂದ್ರ, ಮಹಿಳೆಯರಿಗೆ ಶಾಲೆ ಎನ್ನುವುದು ಕನಸಿನಲ್ಲೂ ಮೂಡಲಾಗದ ಅಸ್ಪಷ್ಟ ಕಲ್ಪನೆಯಾಗಿಯೇ ಉಳಿದಿತ್ತು.

ಈ ಪರಿಸ್ಥಿತಿ ಇರುವ ಕಾಲದಲ್ಲಿಯೇ ಸಾವಿತ್ರಿ ಬಾಯಿ ಫುಲೆಯವರು ಮಹಾರಾಷ್ಟ್ರದ ಸತಾರ ಜಿಲ್ಲೆಯ ನಾಯಗಾಂವ ಹಳ್ಳಿಯಲ್ಲಿ 1831 ಜನವರಿ 3 ರಲ್ಲಿ ಜನಿಸಿದರು. ಸಾವಿತ್ರಿ ಬಾಯಿಯ ವರಿಗೆ 9 ವರ್ಷವಾದಾಗ ಮದುವೆಯಾಯಿತು. ಅವಳನ್ನು ಮದುವೆಯಾದ ಹುಡುಗ ಸಾಮಾನ್ಯ ವರನಾಗಿರಲಿಲ್ಲ. ಅವ ಇಂಗ್ಲಿಷ್ ಕಲಿತು ಅರಿವಿನ ಸ್ಫೋಟಕ್ಕೆ ಒಳಗಾಗಿದ್ದ ಜೋತಿಬಾ. ಶಾಲೆ ಕಲಿಯದ ಹೆಂಡತಿ ಸಾವಿತ್ರಿಗೆ ಗಂಡನೇ ಮೊದಲ ಶಿಕ್ಷಕನಾಗಿ ಅಕ್ಷರ ಕಲಿಸಿದ. ನಂತರ ಜೋತಿಬಾ ಅಸ್ಪೃಶ್ಯ ಹಾಗೂ ತಳ ಸಮುದಾಯದ ಮಕ್ಕಳಿಗೆಂದು ಶಾಲೆ ತೆರೆದಾಗ ಗಂಡುಮಕ್ಕಳಂತೆಯೇ ಹೆಣ್ಣುಮಕ್ಕಳಿಗೂ ಶಿಕ್ಷಣದ ಅವಶ್ಯಕತೆ ಇದೆ ಎಂದು ಅರಿತರು. ಹೆಣ್ಣುಮಕ್ಕಳ ಶಾಲೆ ತೆರೆಯಲು ಶಿಕ್ಷಕಿಯರ ಕೊರತೆಯಿತ್ತು. ಆಗ ಜೋತಿಬಾ ಶಿಕ್ಷಕ ತರಬೇತಿ ಪಡೆಯಲೆಂದು ಸಾವಿತ್ರಿ ಬಾಯಿಯನ್ನು ಅಹ್ಮದ್ ನಗರದ ಫಾರ್ಮಲ್

ಸ್ಕೂಲಿಗೆ ಕಳಿಸಿದರು. ಸಾವಿತ್ರಿಬಾಯಿ ಜೊತೆಗೆ ಫಾತಿಮಾ ಶೇಕ್ ಎನ್ನುವ ಮಹಿಳೆಯೂ ತರಬೇತಿ ಪಡೆದು ನಂತರ ಜೋತಿಬಾರ ಶಾಲೆಗಳಲ್ಲಿ ಕೆಲಸ ಮಾಡಿದರು.

ತರಬೇತಿ ಮುಗಿಸಿ ಸಾವಿತ್ರಿಬಾಯಿ ಬಂದ ಮೇಲೆ 9 ವಿದ್ಯಾರ್ಥಿಗಳೊಂದಿಗೆ ಪುಣೆಯಲ್ಲಿ 1849 ರಲ್ಲಿ ಮೊದಲ ಶಾಲೆ ಶುರುವಾಯಿತು. ಅಹ್ಮದ್ ನಗರದ ಸದಾಶಿವ ಗೋವಂದೆ ಮಕ್ಕಳಿಗೆ ಉಚಿತ ಪುಸ್ತಕ ಒದಗಿಸಿದರು. ಆದರೆ ಶಾಲೆಗಾಗಿ ಸ್ಥಳ ಕೊಡುವವರು ಮನಸು ಬದಲಾಯಿಸುತ್ತ ಇದ್ದುದ್ದರಿಂದ ಶಾಲೆಯೂ ನಿರಂತರ ಸ್ಥಳ ಬದಲಾಯಿಸುತ್ತ, ಮುಚ್ಚುತ್ತ-ತೆರೆಯುತ್ತ ಹೋಯಿತು. 1851 ರಲ್ಲಿ ಎರಡನೇ ಶಾಲೆ ಶುರುವಾಯಿತು. 1852 ರಲ್ಲಿ ಮಹಿಳಾ ಸೇವಾ ಮಂಡಲ ಶುರುವಾಯಿತು. ಧಾರ್ಮಿಕ, ಆಧ್ಯಾತ್ಮಿಕ ವ್ಯಕ್ತಿಯಾಗಿದ್ದ ಸಾವಿತ್ರಿಬಾಯಿ ತಾನು ಮಾಡುತ್ತಿರುವ ಕೆಲಸದ ಬಗೆಗೆ ಅಚಲ ಶ್ರದ್ಧೆಯನ್ನಿಟ್ಟುಕೊಂಡಿದ್ದರು. ಶಾಲೆಗೆ ಹೋಗುವಾಗ ದಾರಿ ಮೇಲೆ ತೂರಿ ಬರುವ ಕಲ್ಲು, ಮಣ್ಣು, ಸಗಣಿಗಳ ದಾಳಿಗೆ ಎದೆಗುಂದದೇ ಪಾಠ ಹೇಳಿದರು.

ಫುಲೆ ದಂಪತಿಗಳು ಒಂದಾದ ಮೇಲೊಂದು ಶಾಲೆ ತೆರೆಯತೊಡಗಿದಾಗ ಅಕ್ಷರ ಕಲಿಯಬಾರದವರಿಗೆ ಕಲಿಸುತ್ತ ಧರ್ಮದ್ರೋಹ ಮಾಡುತ್ತಿದ್ದಾರೆ ಎಂಬ ಆಪಾದನೆಗಳು ಬಂದವು. ಬೆದರಿಕೆಗಳೂ ಬಂದವು. ಅದೆಲ್ಲದರಿಂದ ಒತ್ತಡಕ್ಕೊಳಗಾದ ಜೋತಿಬಾ ತಂದೆ ಮಗ ಸೊಸೆಯನ್ನು ಮನೆಯಿಂದ ಹೊರಕಳಿಸಿದರು. ಯುವದಂಪತಿ ಅಂಜದೆ ಬೇರೆ ಮನೆ ಮಾಡಿಕೊಂಡರು. ಸಾವಿತ್ರಿ ಬಾಯಿಯವರ ಅಣ್ಣ ಕೂಡಾ ಅಸ್ಪೃಶ್ಯರಿಗೇಕೆ ಶಿಕ್ಷಣ ಕೊಡುತ್ತಿದ್ದೀ ಎಂದು ಅವರ ಬಳಿ ವಾದಿಸಿದ್ದರು. ಬಂಧುಬಳಗಕ್ಕೂ, ಹಿತೈಷಿಗಳಿಗೂ ಉತ್ತರಿಸುತ್ತ, ಮನವೊಲಿಸುತ್ತ ಫುಲೆ ದಂಪತಿಗಳು ತಮ್ಮ ಕೆಲಸ ಮುಂದುವರೆಸಿದರು.

ಬೋಧಿಸುವವರು ಎಷ್ಟು ಯಶಸ್ವಿ ಎಂದು ತಿಳಿಯಬೇಕಾದರೆ ಅವರ ಶಿಷ್ಯ ಗಣವನ್ನು ನೋಡಬೇಕಲ್ಲವೇ? ಫುಲೆ ಶಾಲೆಯಲ್ಲಿ ಕಲಿತ ಹೆಣ್ಣುಮಕ್ಕಳು ವೈಚಾರಿಕ ಜಾಗೃತಿ ಪಡೆದು ಕೆಲವರು ಬರಹಗಾರರಾದರು. ಭಾರತದ ಮೊತ್ತಮೊದಲ ಸ್ತ್ರೀ ವಾದಿ ಲೇಖಕಿ ತಾರಾಬಾಯಿ ಶಿಂಧೆ ಇವರ ಶಿಷ್ಯೆ. ಆಕೆ ಬರೆದ 'ಸ್ತ್ರೀ-ಪುರುಷ ತುಲನ' ಎಂಬ ಪುಟ್ಟ ಹೊತ್ತಗೆ ಇವತ್ತಿಗೂ ದಿಟ್ಟವಾಗಿ ಯುವತಿಯೊಬ್ಬಳು ಬರೆದ ಮೊದಲ ಭಾರತೀಯ ಸ್ತ್ರೀವಾದಿ ಬರಹವಾಗಿದೆ. ಮತ್ತೊಬ್ಬ ದಲಿತ ವಿದ್ಯಾರ್ಥಿನಿ ಮುಕ್ತಾಬಾಯಿಯ ಪ್ರಬಂಧಗಳೂ ಹುಡುಗಿಯರು ಪಡೆಯುತ್ತಿದ್ದ ಅರಿವಿನ ಶಿಕ್ಷಣದ ಗುಣಮಟ್ಟ ತಿಳಿಸುತ್ತದೆ.

ಅದುವರೆಗೂ ಅಸ್ಪೃಶ್ಯ ಸಮುದಾಯದ ಜನ ಬಾಯಾರಿದಾಗ ಹನಿ ನೀರನ್ನು ತಂತಾವೇ ಕೆರೆ, ಬಾವಿ, ನದಿಗಳಿಂದ ತೆಗೆದುಕೊಳ್ಳುವಂತಿರಲಿಲ್ಲ. ಫುಲೆ ದಂಪತಿಗಳು 1868 ರಲ್ಲಿ ಎಲ್ಲರಿಗೂ ಬಳಕೆಗೆ ಮುಕ್ತವಾದ ನೀರಿನ ತೊಟ್ಟಿ ಕಟ್ಟಿದರು. ಜಾತಿ ತಾರತಮ್ಯ ಮತ್ತು ಶೋಷಣೆಯನ್ನು ಕೊನೆಗೊಳಿಸಬೇಕೆಂದರೆ ಚಿಂತನಶೀಲತೆಯನ್ನು, ಸತ್ಯ ತಿಳಿಯಬೇಕೆಂಬ ಹಂಬಲವನ್ನು ಜನರಲ್ಲಿ ಬಿತ್ತಬೇಕೆಂಬ ಮಹದಾಸೆಯಿಂದ 1873 ರಲ್ಲಿ 'ಸತ್ಯಶೋಧಕ ಸಮಾಜ' ಕಟ್ಟಿದರು. ಅದರ ಮೂಲತತ್ವ 'ನಾವೆಲ್ಲರೂ ದೇವರ ಮಕ್ಕಳು; ದೇವರಿಗೂ ನಮಗೂ ಯಾವ ಮಧ್ಯವರ್ತಿಯ ಅವಶ್ಯಕತೆಯೂ ಇಲ್ಲ' ಎನ್ನುವುದು. ಅದೇ ವರ್ಷ ಪುರೋಹಿತರಿಲ್ಲದೆ ಮೊದಲ ಮದುವೆ ಮಾಡಿಸಿದರು. 1874 ರಲ್ಲಿ ಬ್ರಾಹ್ಮಣ ವಿಧವೆ

ಕಾಶೀಬಾಯಿಯ ಮಗ ಯಶವಂತನನ್ನು ದತ್ತು ತೆಗೆದುಕೊಂಡು ಸಾಕಿದರು. ಮುಂದೆ ಆತ ಓದಿ ವೈದ್ಯನಾದ.

ಇಂಥ ಸಂಕಟಕಾಲದಲ್ಲಿ ಮಕ್ಕಳಲ್ಲಿ ವೈಚಾರಿಕ ಮನೋಭಾವ ಬೆಳೆಸುವ, ಜಾತ್ಯತೀತ ಮೌಲ್ಯ ತುಂಬುವ ಅವಶ್ಯಕತೆಯಿದೆ. ನೆಲದಾಳದಲ್ಲಿ ಇಂದಿಗೂ ಅಲ್ಲಲ್ಲೋ ಇರುವ ಶುದ್ಧಜಲವನ್ನು, ಜಲದ ಕಣ್ಣನ್ನು ಅರಸಬೇಕಿದೆ. ಅಲ್ಪಸೂಚಿಯ ಕೆಲಸವನ್ನು ಶಿಕ್ಷಕ ಬಂಧುಗಳು ನಿಭಾಯಿಸಬೇಕಾಗಿದೆ. ದಿಕ್ಸೂಚಿಯಾಗಬಲ್ಲ. ಸತ್ಯದರ್ಶಿಯಾಗಬಲ್ಲ ಶಿಕ್ಷಣ ನೀಡುವಂಥ ಅತಿ ಮಹತ್ತರ ಜವಾಬ್ದಾರಿ ಅವರ ಮೇಲಿದೆ.

## ಕೃತಿಕಾರರ ಪರಿಚಯ



ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ವೇದಿಕೆ 'ಮಂಥನ'ದ ಸಂಚಾಲಕರಾದ ಡಾ. ಎಚ್. ಎಸ್. ಅನುಪಮ ವೃತ್ತಿಯಲ್ಲಿ ವೈದ್ಯರು. ಇವರ ಸ್ಥಳ ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲೂಕಿನ ಹೆಬ್ಬಾಗಿಲು. ಜನಿಸಿದ್ದು 6-2-1970 ರಲ್ಲಿ. 'ಕಾಡುಹಕ್ಕಿಯ ಹಾಡು' ಮತ್ತು 'ಸಹಗಮನ' (ಕವನ ಸಂಕಲನ), 'ಹೂವರಳಿದ್ದಕ್ಕೆ ಯಾಕೆ ಸಾಕ್ಷಿ?' (ಕಥಾ ಸಂಕಲನ), 'ಜೀವಕೋಶ' ವೈದ್ಯಲೋಕದ ಕಥನ (ಚಿಂತನ ಬರಹ), 'ನೈಲ್ ನದಿಯಗುಂಟ ಶರಾವತಿಯನರಸುತ್ತ' ಮತ್ತು 'ಅಂಡಮಾನ್: ಕಂಡ ಹಾಗೆ' (ಪ್ರವಾಸ ಕಥನ), 'ಛತ್ರಪತಿ ಶಾಹೂ: ಜನರ ನೋವಿಗೆ ಮಿಡಿದ ಪ್ರಾಣಮಿತ್ರ' ಮತ್ತು 'ಕ್ರಾಂತಿಜ್ಯೋತಿ ಸಾವಿತ್ರಿಬಾಯಿ ಫುಲೆ' (ಜೀವನ ಚರಿತ್ರೆ)- ಇವು ಪ್ರಮುಖ ಕೃತಿಗಳು. ಇವರ 'ನೋಯುವ ಹಲ್ಲಿಗೆ ಹೊರಳುವ ನಾಲಿಗೆ' ಎಂಬ ಅಂಕಣ ಬರಹ ಜನಪ್ರಿಯವಾಗಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರು.

ಪ್ರಸ್ತುತ ಗದ್ಯಭಾಗವನ್ನು ಡಾ. ಎಚ್. ಎಸ್. ಅನುಪಮ ಅವರ 'ಕ್ರಾಂತಿಜ್ಯೋತಿ ಸಾವಿತ್ರಿಬಾಯಿ ಫುಲೆ' ಎಂಬ ಜೀವನ ಚರಿತ್ರೆಯಿಂದ ಆರಿಸಿಕೊಳ್ಳಲಾಗಿದೆ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಸಾವಿತ್ರಿಬಾಯಿಯವರು ಎಲ್ಲಿ ಜನಿಸಿದರು?
2. ಸಾವಿತ್ರಿಬಾಯಿಯವರ ಮೊದಲನೆಯ ಗುರು ಯಾರಾಗಿದ್ದರು?
3. ಭಾರತದ ಮೊತ್ತಮೊದಲ ಸ್ತ್ರೀವಾದಿ ಲೇಖಕಿ ಯಾರು?
4. ಸತ್ಯ ಶೋಧಕ ಸಮಾಜದ ಮೂಲತತ್ವವೇನು?
5. ಪುಲೆ ದಂಪತಿಗಳು ಯಾರನ್ನು ದತ್ತು ಪಡೆದರು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಈ ಹಿಂದೆ ಹೆಣ್ಣು ಅಕ್ಷರ ಕಲಿತರೆ ಏನಾಗುತ್ತದೆಂದು ಹೇಳಲಾಗುತ್ತಿತ್ತು?
2. ಸ್ವಾತಂತ್ರ್ಯ ಚಳುವಳಿ ರೂಪುಗೊಳ್ಳುತ್ತಿದ್ದ ಕಾಲದಲ್ಲಿ ಹೆಣ್ಣಿನ ಪರಿಸ್ಥಿತಿ ಹೇಗಿತ್ತು?
3. ಪುಲೆ ದಂಪತಿಗಳು ಶಾಲೆ ತೆರೆಯುತ್ತಾ ಹೋದಂತೆ ಎದುರಿಸಿದ ಸಮಸ್ಯೆಗಳಾವುವು?
4. ಪುಲೆ ದಂಪತಿಗಳು ಕೈಗೊಂಡ ಸಾಮಾಜಿಕ ಸುಧಾರಣೆಗಳಾವುವು?

## 4. ರಮ್ಯಸೃಷ್ಟಿ

ಮಧುರಚೆನ್ನ

ಮಹಾಕಾಶ ಶಿರದ ಮೇಲೆ
ಆಹಾ- ಪೃಥ್ವಿ ರಮ್ಯ ಮುಂದೆ
ಬಾನುಭೂಮಿ ಅಪ್ಪಿದಲ್ಲಿ
ಏನು ರಮ್ಯ ದೂರದಲ್ಲಿ

ಪ್ರಭಾಮಯನು ವಿಭಾಕರನು
ನಭಾಂಗಣದಿ ವಿರಾಜಿಪನು
ಹಾಲು ಮೋಡ ಅಲ್ಲಿ ಇಲ್ಲಿ
ನೀಲಗಗನ ಅಲ್ಲಿ ಇಲ್ಲಿ

ಹೊನ್ನ ಬಿಸಿಲು ಸೂಸಿ ಸೂಸಿ
ರನ್ನನೆಲದಿ ಹಾಸಿ ಹಾಸಿ
ತರುವು ಹಸಿರು ಮರವು ಹಸಿರು
ಮೆರೆವ ಹುಲ್ಲು ಹಚ್ಚಹಸಿರು

ಮರದ ಸಾಲು ಮೇವ ಮೇಕೆ
ತೆರೆದ ಹಕ್ಕಿ ಏನು ಚೆಲುವು
ಎತ್ತು ಎಮ್ಮೆ ಆಡು ಆವು
ಚಿತ್ತಗೊಟ್ಟು ಮೇವ ರೀವು

ಹೆಣ್ಣು ಗಂಡು ಕೂಸು ಕುನ್ನಿ
ದಿನ್ನಿ ದಿಬ್ಬ ಹಾದಿ ಬೀದಿ
ಏನು ಚಂದ ಏನು ಚೆಲುವು
ಏನು ಬೇಕು ಇದಕು ಮಿಗಿಲು

ಮಹಾಕಾಶ ಶಿರದ ಮೇಲೆ
ಆಹಾ- ಪೃಥ್ವಿ ರಮ್ಯ ಮುಂದೆ
ಬಾನು ಭೂಮಿ ಅಪ್ಪಿದಲ್ಲಿ
ಏನು ರಮ್ಯ ದೂರದಲ್ಲಿ

## ಕೃತಿಕಾರರ ಪರಿಚಯ



ಮಧುರಚೆನ್ನ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಚನ್ನಮಲ್ಲಪ್ಪ ಹಲಸಂಗಿ ಅವರು (ಕ್ರಿಸ್ತ ಶಕ 1903) ವಿಜಯಪುರ ಜಿಲ್ಲೆ ಇಂಡಿ ತಾಲೂಕಿನ ಹಲಸಂಗಿ ಗ್ರಾಮದವರು. ಮುಲ್ಕಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದ ಇವರು ಸ್ವಂತ ಪರಿಶ್ರಮದಿಂದ ಬಂಗಾಳಿ, ಇಂಗ್ಲಿಷ್, ಮರಾಠಿ, ಗುಜರಾತಿ, ತಮಿಳು, ಪರ್ಷಿಯನ್ ಭಾಷೆಗಳನ್ನು ಕಲಿತರು. ಜಾನಪದ ಮತ್ತು ವಚನವಾಙ್ಮಯವನ್ನು ವಿಸ್ತಾರವಾಗಿ ಅಧ್ಯಯನ ಮಾಡಿದ್ದರು. ಪೂರ್ವರಂಗ, ಪೂರ್ವಯೋಗದ ಪಥದಲ್ಲಿ, ಕಾಳರಾತ್ರಿ, ಬೆಳಗು ಇವರ ಪ್ರಮುಖ ಕೃತಿಗಳು. ನನ್ನ ನಲ್ಲ– ಕವನ ಸಂಕಲನ. ಜನಪದ ಗೀತಗಳ ಸಂಕಲನಗಳನ್ನು ಸಂಪಾದಿಸಿದ್ದಾರೆ. ಸಿಂಪಿಲಿಂಗಣ್ಣನವರೊಂದಿಗೆ ಕನ್ನಡದ ಕುಲಗುರು ವಿದ್ಯಾರಣ್ಯ ಕೃತಿಯನ್ನು ರಚಿಸಿದ್ದಾರೆ.

## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

1. 'ರಮ್ಯಸೃಷ್ಟಿ' ಕವಿತೆಯಲ್ಲಿ ಯಾವ ಸಂದರ್ಭವನ್ನು ವರ್ಣಿಸಲಾಗಿದೆ?
2. ಸೂರ್ಯ ಎಲ್ಲಿ ವಿರಾಜಿಸುತ್ತಿದ್ದಾನೆ?
3. ಸೂರ್ಯೋದಯದ ಪ್ರಕೃತಿಸೌಂದರ್ಯ ಹೇಗಿದೆ?
4. ಜೀವರಾಶಿಯ ವರ್ಣನೆ 'ರಮ್ಯಸೃಷ್ಟಿ' ಕವನದಲ್ಲಿ ಹೇಗೆ ಮೂಡಿಬಂದಿದೆ?
5. 'ರಮ್ಯಸೃಷ್ಟಿ' ಪದ್ಯದಲ್ಲಿ ಯಾವ ಯಾವ ಪ್ರಾಣಿಗಳು ಮೇಯುವ ರೀತಿಯನ್ನು ವರ್ಣಿಸಲಾಗಿದೆ?

6. ಯಾವುದರ ಚೆಲುವಿಗೆ ಮಿಗಿಲಿಲ್ಲದಂತಾಗಿದೆ?

## 5. ನನ್ನ ಅಯ್ಯ

ದು. ಸರಸ್ವತಿ

ಆಸ್ಪತ್ರೆ ಹಾಸಿಗೆಯಲ್ಲಿ ಮಗುವಿನಂತೆ ಮಲಗಿದ್ದ ಅವ್ವನನ್ನು, ಅಯ್ಯ (ಅಪ್ಪ) ಮಗುವಿನಂತೆ ಆರೈಕೆ ಮಾಡುತ್ತಿದ್ದ. ತುತ್ತು ಬಾಯಿಗಿರಿಸುತ್ತಿದ್ದ. ಅವಳು ವಾಂತಿ ಮಾಡಿದರೆ ತನ್ನ ಬೊಗಸೆಯನ್ನೇ ಒಡ್ಡಿ ಸ್ವಚ್ಛ ಮಾಡುತ್ತಿದ್ದ. ಅವಳ ಬಟ್ಟೆಯನ್ನು ಲವಲೇಶವೂ ಗಂಡಸೆಂಬ ದೊಡ್ಡಸ್ತಿಕೆ ತೋರದೇ ಒಗೆದು ಹಾಕುತ್ತಿದ್ದ. ಅವಳು ಬದುಕುವುದೇ ಇಲ್ಲ ಎಂದಾಗ ಕೊನೆಯ ಚಣದವರೆಗೂ ಮಗ್ಗಲು ಬಿಟ್ಟು ಏಳದವ. ಅವಳು ತೀರಿಕೊಂಡಾಗ ತನ್ನದೆಲ್ಲ ಭಾಗ್ಯ ಹೋಯಿತೆಂದು ಹೆಣ್ಣಿನಂತೆ ಬೋರಾಡಿ ಅತ್ತವ. ಅವನ 'ಬಿಲವ್ಡ್ ವೈಫ್' (ಅವ್ವನನ್ನು ಅಯ್ಯ ಹಾಗೇ ಕರೆಯುವುದು) ನನ್ನು ಎದೆಯೊಳಗೆ ಜೀವಂತವಾಗಿರಿಸಿಕೊಂಡೇ ಬದುಕುತ್ತಿರುವವ. ಆ ಬಗ್ಗೆ ಏನಾದರೂ ಬರೆಯಬೇಕೆಂದು ಕೇಳಿದರೆ 'ಹೋಗೇ ಹುಚ್ಚಿ ಅದೇನ್ ಹೇಳಕೋಗ್ತಿ' ಎಂದ ಗದರಿಬಿಡುತ್ತಾನೆ.

ಇದನ್ನೆಲ್ಲ ನೋಡುತ್ತಿದ್ದ ನನ್ನ ತಲೆಯೊಳಗೆ ಗಿಜಿಗುಡುತ್ತ ಸಂಚಾರ ದಟ್ಟಣೆಯಂತಾಗಿದ್ದ ಗಂಡು-ಹೆಣ್ಣು, ಗಂಡ-ಹೆಂಡತಿಯರ ಕುರಿತ ಪೊಳ್ಳು ರೊಮ್ಯಾಂಟಿಕ್ ಕಲ್ಪನೆಗಳು ಒಂದೊಂದೇ ಸರಿಯುತ್ತ ಸಂಬಂಧಗಳ ದಾರಿ ಕಾಣಿಸುತ್ತಿದ್ದವು. ದೇಹದಾಚೆಗಿನ ಮಿಡಿತಗಳು ಕೇಳುತ್ತಿದ್ದವು. ಬೆಳೆಸಿದ ತಾಯಿಯಾಗಿ, ಸ್ವಾಭಿಮಾನ, ಶ್ರದ್ಧೆ, ಪ್ರಾಮಾಣಿಕತೆಯಿಂದ ಬದುಕುವ ದಾರಿ ತೋರುವ ಗುರುವಾಗಿರುವ ನನ್ನ ಅಯ್ಯ ಅಂದರೆ ನನ್ನ ತಂದೆ, ಹೆಸರು: ಎ. ಜಿ. ದುರ್ಗಪ್ಪ. ಹುಟ್ಟಿದ ಊರು ದಾವಣಗೆರೆ ಜಿಲ್ಲೆಯ ಬೆನ್ನಿಕೋಡು ಗ್ರಾಮ. ಏನೂ ತಿಳಿಯದ ಬಾಲಕನಾಗಿರುವಾಗಲೇ ತಾಯಿತಂದೆಯನ್ನು ಕಳೆದುಕೊಂಡು, ಹಸಿವು, ಬಡತನವನ್ನೇ ಬುತ್ತಿಯಾಗಿಸಿಕೊಂಡು ಏಕಾಂಗಿಯಾಗಿ ವಿದ್ಯೆ ಕಲಿತ. ನಂಬಿಕೆಯ ಗಂಡ, ಪ್ರೀತಿಯ ತಂದೆ, ಮೆಚ್ಚಿನ ತಾತನಾಗುವವರೆಗೂ ನಡೆದಿರುವ ನಡಿಗೆಯನ್ನು ಹಿಡಿಯಲಾಗದು. ನಾಲ್ಕು ಮಕ್ಕಳ ತಂದೆಯಾಗಿರುವುದಕ್ಕೆ ನಿಸ್ವಾರ್ಥವಾಗಿ ಹಲವರ ಬದುಕು ಕಟ್ಟಿಕೊಳ್ಳಲು ಆಸರೆಯಾಗಿದ್ದ. ನನ್ನ ಅವ್ವನ ಮೆಚ್ಚಿನ ನಂಬಿಕೆಯ ಸಂಗಾತಿಯಾಗಿದ್ದಕ್ಕೆ ಅಯ್ಯನ ಬಗ್ಗೆ ನನಗೆ ಅತ್ಯಂತ ಹೆಮ್ಮೆ ಎನಿಸುವುದು. ಅಯ್ಯನವರಿಗೆ ನೆಲಕ್ಕೊತ್ತಿ ಶರಣು ಶರಣು.



## ಅಯ್ಯನೆಂಬ ಅವ್ವ

ಲೋಕದ ಇನ್ನಾವ ಕೊಳೆಯೂ ತಾಕಬಾರದು ಎನ್ನುವಂತೆ ನನ್ನ ಮತ್ತು ಅಕ್ಕನ ಉದ್ದನೆಯ ರಾಶಿ ಕೂದಲನ್ನು ಸೀಗೆಪುಡಿಯಲ್ಲಿ ನವಿರಾಗಿ ಉಜ್ಜಿ ತೊಳೆದು, ಮೈಯನ್ನು ಮೆತ್ತನೆ ತೆಂಗಿನ ನಾರಿನಲ್ಲಿ ಉಜ್ಜಿ ಸ್ನಾನ ಮಾಡಿಸುತ್ತಿದ್ದ ನನ್ನ ಅಯ್ಯ. ಸಾಂಬ್ರಾಣಿ ಧೂಪ ಹಾಕಿ ಚೂರೂ ನೋವಾಗದಂತೆ ಸಿಕ್ಕು ಬಿಡಿಸುತ್ತಿದ್ದ. ದೇಹ ಗುಡಿಯೆಂಬುದನ್ನು ಅವರಿಂದಲೇ ಕಲಿತೆ. ಸ್ವಚ್ಛತೆಯೇ ಸೌಂದರ್ಯ ಎಂದು ಕಲಿಸಿದ್ದು ನನ್ನಪ್ಪ. ರಾಷ್ಟ್ರೀಯ ಪ್ರಶಸ್ತಿ ಪಡೆದ ಮಕ್ಕಳ ಚಿತ್ರ ಅಥವಾ ರಾಜ್‌ಕುಮಾರ್ ಸಿನಿಮಾಗಳಿಗೆ ಕರೆದುಕೊಂಡು ಹೋಗುತ್ತಿದ್ದರಿಂದ ಸದಭಿರುಚಿ ಬೆಳೆಯಿತು. ಕಾಮತ್ ಹೋಟೇಲಿನಲ್ಲಿ ಮಸಾಲೆದೋಸೆ, ಜಾಮೂನು ಕೊಡಿಸಿ ತಾನು ತಿನ್ನದೆ ನಾವು ಸರಿಯಾಗಿ ತಿನ್ನುತ್ತಿದ್ದೇವೆಯೇ ಎಂದು ಗಮನಿಸುತ್ತಿದ್ದ.

ನನಗೆ ಮತ್ತು ಅಕ್ಕನಿಗೆ ಅಯ್ಯನ ಎದೆ ಮತ್ತು ಹೊಟ್ಟೆಗಳೇ ಎಷ್ಟೋ ವರ್ಷ ದಿಂಬುಗಳಾಗಿದ್ದವು. ಹಬ್ಬಕ್ಕೆಂದು ಬಟ್ಟೆ ತಂದು ಲಂಗವೋ, ಮ್ಯಾಕ್ಸಿಯೋ, ಬೆಲ್ ಬಾಟಮ್ಮೋ ಯಾವುದೇ ಆಗಲಿ ಟೈಲರ್ ಅಂಗಡಿಯಲ್ಲಿ ಕೂತು ಹೊಲಿಸಿಕೊಂಡು ತಂದು ಸ್ನಾನ ಮಾಡಿಸಿ ತೊಡಿಸುತ್ತಿದ್ದ. ಹೆಣ್ಣು ಮಕ್ಕಳ ಬಟ್ಟೆ ಎಂದು ಮೂಗು ಮುರಿಯದೇ ನಮ್ಮ ಬಟ್ಟೆಗಳನ್ನು ಒಗೆದು ಹಾಕಿ ಒಣಗಿದಮೇಲೆ ಮಡಿಚಿಡುತ್ತಿದ್ದ. ಯಾವ ಕೆಲಸವೂ ಹೆಂಗಸರದ್ದು ಅಥವಾ ಗಂಡಸರದ್ದು ಎಂಬ ಗಡಿಗಳಿಲ್ಲದೇ ದುಡಿಯುತ್ತಿದ್ದ. ಎಲ್ಲ ಹರಿದ ಸಲ್ವಾರುಗಳನ್ನು ಸೂಜಿಗೆ ದಾರ ಪೋಣಿಸಿ ಅಚ್ಚುಕಟ್ಟಾಗಿ ಹೊಲೆದಿಡುತ್ತಿದ್ದ. ಇವೆಲ್ಲ ಆತನ ಮಮತೆ ತೋರುವ ಕ್ರಿಯೆಗಳಾಗಿದ್ದವು. ಅವನ ಪ್ರೀತಿ, ಆರೈಕೆ, ಐರನ್ ಬಾಕ್ಸ್ ನಾಚುವಂತೆ ಮಡಿಚಿಟ್ಟ ಯೂನಿಫಾರಂ, ಪಾಲೀಶ್ ಮಾಡಿದ ಫಳಫಳ ಹೊಳೆಯುವ ಶೂಗಳು, ಅಚ್ಚುಕಟ್ಟಾಗಿ ರಟ್ಟುಹಾಕಿದ ಪುಸ್ತಕಗಳು ಎಲ್ಲದರಲ್ಲೂ ಕಾಣಿಸುತ್ತಿದ್ದ ಅಯ್ಯನ ಅಚ್ಚುಕಟ್ಟುತನ ತಲೆಯೊಳಗೆ ಅಚ್ಚಾಗಿದೆ.

## ಸಮರ್ಥ ಅಧಿಕಾರಿ:

ಬಹಳ ಜಾಣನೂ, ಪ್ರಾಯೋಗಿಕನೂ ಆದ ನನ್ನ ಅಯ್ಯ ಅತ್ಯಂತ ಸಮರ್ಥ ಅಧಿಕಾರಿಯಾಗಿಯೂ ಯಶಸ್ವಿಯಾದವನು. ಸಹಕಾರಿ ಇಲಾಖೆಯಲ್ಲಿ ಅನೇಕ ವರ್ಷ ಕೆಲಸ ಮಾಡಿರುವ ನನ್ನ ಅಯ್ಯನಿಗೆ ಇಂದಿಗೂ ಕಾಯ್ದೆ ಕಾನೂನುಗಳು ನಾಲಿಗೆಯಲ್ಲಿ ನಲಿದಾಡುತ್ತವೆ. ವರ್ಗ ಮಾಡಿದ ಕಡೆಗೆಲ್ಲಾ ಹೋಗಿ ಸೇವೆ ಮಾಡಿರುವ ನನ್ನ ಅಯ್ಯನಿಗೆ ಇಡೀ ಕರ್ನಾಟಕ ಅಂಗೈ ಗೆರೆಯಂತೆ ಪರಿಚಿತ. ಯಾವುದೇ ಊರಿಗೆ ಹೋಗುವಾಗ ದಾರಿಯಲ್ಲಿ ಬರುವ ಜಿಲ್ಲೆ, ತಾಲ್ಲೂಕುಗಳ ಮುಖ್ಯ ವ್ಯಕ್ತಿಗಳು, ಅಲ್ಲಿನ ಮುಖ್ಯ ಸ್ಥಳಗಳ ಬಗ್ಗೆ ಕೊಡುವ ವಿವರ ಅಚ್ಚರಿ ಹುಟ್ಟಿಸುತ್ತದೆ. ಅಧಿಕಾರದಲ್ಲಿದ್ದರೂ ಎಂದೂ ಭ್ರಷ್ಟನಾಗದ ನಮ್ಮಯ್ಯ ಒಂದೇ ಒಂದು ಕಾಸನ್ನೂ ಅನ್ಯಾಯದಿಂದ ಸಂಪಾದಿಸಿಲ್ಲ. ನಾಲ್ಕೇ ಜೊತೆ ಬಟ್ಟೆಯನ್ನು ಅಚ್ಚುಕಟ್ಟಾಗಿ ತೊಟ್ಟು, ಯಾವುದೇ ವ್ಯಸನಗಳಿಗೆ ಈಡಾಗದೇ ತನ್ನ ಕೆಲಸ, ಮನೆ, ಎಂದುಕೊಂಡು ಮಕ್ಕಳಿಗೆ ಯಾವುದೇ ಕೊರತೆ ಬಾರದಂತೆ ತುಪ್ಪ ಅನ್ನವನ್ನೇ ಉಣ್ಣಿಸಿ ಬೆಳೆಸಿದವ. ಸಮುದಾಯದಲ್ಲಿ ಅತ್ಯಂತ ಪ್ರಮುಖ ವ್ಯಕ್ತಿಯಾದರೂ, ಸಾಮರ್ಥ್ಯವಿದ್ದರೂ ಯಾವ ಸ್ಥಾನವನ್ನೂ ಆರಿಸಿಕೊಳ್ಳದವ. ತನ್ನ ಕೆಲಸವನ್ನು, ಮಾಡಬೇಕಾದ ಸಹಾಯವನ್ನು ಕರ್ತವ್ಯದಂತೆ ಶ್ರದ್ಧೆಯಿಂದ ಮಾಡಿ ಮುಗಿಸುವ ಅಯ್ಯ, ಮನೆಗಿಂತ ಮಿಗಿಲಾದುದು ಯಾವುದೂ ಇಲ್ಲ ಎಂಬಂತೆ ಬದುಕಿದ. ಯಾರ ಮುಲಾಜಿಗೂ ಒಳಪಟ್ಟವನಲ್ಲ. ಯಾರನ್ನೂ ಯಾವ ಕಾರಣಕ್ಕೂ ಓಲೈಸಲು ಹೋಗದ ಅವನ ನಡೆ, ನುಡಿ, ನಿಲುವು, ವರ್ತನೆ, ಎಲ್ಲದರಲ್ಲೂ ಆತ್ಮವಿಶ್ವಾಸ, ಸ್ವಾಭಿಮಾನವೇ ಉಸಿರಾಡುತ್ತವೆ. ಇವನ ಕೋಪ ಗುಡುಗಿನಂತೆ, ಮನಸ್ಸಿನಲ್ಲಿರುವುದನ್ನು ನೇರವಾಗಿ ಹೇಳಿಬಿಡುವ ಇವನ ಮಾತು ನಿಷ್ಠೂರ, ಅಷ್ಟೇ ನಿಷ್ಠೂರನಾಗಿ ತಪ್ಪಿಗೆ ಕ್ಷಮೆ ಕೇಳಿಬಿಡುವವ. ಸಂಚು ವಂಚನೆಗಳಿಂದ ದೂರವಿರುವ ಪ್ರಾಮಾಣಿಕ.

## ಕೃತಿಕಾರರ ಪರಿಚಯ



ದು. ಸರಸ್ವತಿ ಅವರು (ಜನನ 1963) ದಲಿತ ಸಾಹಿತ್ಯ ಚಳವಳಿಯ ಪ್ರಮುಖ ಕವಯಿತ್ರಿ. ಬೆಂಗಳೂರಿನಲ್ಲಿ ನೆಲೆಸಿರುವ ಇವರು ರಂಗಕಲಾವಿದರಾಗಿ, ಸಮಾಜಸೇವಾಕರ್ತರಾಗಿ ದುಡಿಯುತ್ತಿದ್ದಾರೆ. ಹೆಣೆದರೆ ಜೇಡನಂತೆ ಮತ್ತು ಜೀವಸಂಪಿಗೆ ಎಂಬ ಕವನ ಸಂಕಲನಗಳನ್ನು ಈಗೇನ್ಮಾಡೀರಿ? ಎಂಬ ಅನುಭವ ಕಥನವನ್ನು ಪ್ರಕಟಿಸಿದ್ದಾರೆ.

## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿರಿ.**

1. ಲೇಖಕಿಯ ತಂದೆಯ ಹೆಸರೇನು?
2. ದುರ್ಗಪ್ಪನವರು ತನ್ನ ಹೆಂಡತಿಯನ್ನು ಏನೆಂದು ಕರೆಯುತ್ತಿದ್ದರು?
3. ದುರ್ಗಪ್ಪನವರು ತನ್ನ ಮಕ್ಕಳಿಗೆ ಯಾವ ಸಿನಿಮಾ ತೋರಿಸುತ್ತಿದ್ದರು?
4. ದುರ್ಗಪ್ಪನವರು ತನ್ನ ಹೆಂಡತಿಯನ್ನು ಹೇಗೆ ಆರೈಕೆ ಮಾಡುತ್ತಿದ್ದರು?
5. ದೇಹ ಗುಡಿಯೆಂಬುದನ್ನು ಲೇಖಕಿ ಹೇಗೆ ಅರಿತರು?
6. ಅಪ್ಪನ ಕೆಲಸದ ಬಗ್ಗೆ ಲೇಖಕಿ ಹೇಳುವ ಹೆಮ್ಮೆಯ ಮಾತುಗಳಾವುವು?